

# ಬ್ರೆಕ್ಟ್ ಕವನಗಳ ಓದು

ಸಿ. ಪಿ. ನಾಗರಾಜ

BRECHT KAVANAGALA ODU
by C.P.Nagaraja, published by Nagu Smaraka Prakashana,
75, 5th cross, `A'Block, Krishna Garden, R.V.College post,
Bengaluru-560059. Mobile : 9986347521

| | | |
|---|---|---|
| First Edition | : | 2024 |
| Page | : | 118+4 |
| Price | : | **Rs. 150** |
| Paper | : | Stora Creamy |
| Size | : | Demy 1/8 |
| Copies | : | 500 |
| Copy right | : | Author |
| ಮುಖಪುಟ ವಿನ್ಯಾಸ | : | ಓಂಶಿವಪ್ರಕಾಶ್, ಟೆಕ್ ಫಿಜ್ ಇಂಕ್, ಬೆಂಗಳೂರು. |
| ಪುಟ ವಿನ್ಯಾಸ | : | ಕೆ.ಆರ್. ಹರೀಶ್, 8553184584 |

Cover Image: Bundesarchiv, Bild 183-W0409-300/Kolbe, Jörg/CC-BY-SA 3.0

**ಪ್ರತಿಗಳು ದೊರೆಯುತ್ತವೆ**
ಆರ್.ಸುಧೀಂದ್ರ ಕುಮಾರ್
# 9, 20ನೆಯ ಮ್ಯೆನ್, 3ನೆಯ ಕ್ರಾಸ್
ವಿಜಯನಗರ 2ನೆಯ ಹಂತ
ಹಂಪಿ ಸರ್ಕಲ್ ಹತ್ತಿರ, ಮ್ಯೆಸೂರು–570017
ಮೊ. 8892626269

ಪ್ರಿಂಟರ್ ಹೆಸರು:
**ಟೆಕ್ ಫಿಜ್ ಇಂಕ್,** ಬೆಂಗಳೂರು

# ಮುನ್ನುಡಿ

ಆಧುನಿಕ ಕನ್ನಡ ಸಾಹಿತ್ಯದ ಹಿರಿಕಿರಿಯ ತಲೆಮಾರಿನ ಲೇಖಕರನ್ನು ಮತ್ತೆ ಮತ್ತೆ ಅನುವಾದಕ್ಕಾಗಿ ಆಹ್ವಾನಿಸುತ್ತಿರುವ ಪಾಶ್ಚಾತ್ಯ ಬರಹಗಾರರು ಅನೇಕರು. ಹೊಸ ಕಾಲಮಾನದ ಹೊಸ ಸಂವೇದನೆಯ ಲೇಖಕರು ತಮ್ಮನ್ನು ಮತ್ತೊಮ್ಮೆ ಮುಖಾಮುಖಿಯಾಗಲಿ ಎಂದು ಪಂಥಾಹ್ವಾನ ನೀಡುವ ಅಂಥ ಲೇಖಕರ ಸಂಖ್ಯೆ ದೊಡ್ಡದಿದೆ. ಆ ಬಗೆಯ ಕಬ್ಬಿಗರಲ್ಲಿ ಶೇಕ್ಸ್‌ಪಿಯರ್, ಖಲೀಲ್ ಗಿಬ್ರಾನ್, ಡಬ್ಲ್ಯು.ಬಿ.ಏಟ್ಸ್, ಟಿ.ಎಸ್. ಎಲಿಯೆಟ್, ಬರ್ಟೋಲ್ಟ್ ಬ್ರೆಕ್ಟ್ ಪಾಬ್ಲೊ ನೆರೂಡ ಮೊದಲ ಸಾಲಿನಲ್ಲಿ ಇರುತ್ತಾರೆ. ಆಯಾ ಕಾಲದ ಕನ್ನಡದ ಪ್ರಮುಖ ಲೇಖಕರು ಇವರನ್ನು ಮರುಸಂಧಾನ ಮಾಡುತ್ತ ಬಂದಿರುವುದಕ್ಕಿರುವ ಕಾರಣವನ್ನು ಈವರೆಗೆ ವಿಶ್ಲೇಷಿಸಿದಂತಿಲ್ಲ. ಇಲ್ಲಿ ಸೂಚಿಸಿದ, ಸೂಚಿಸಲಾರದ ಲೇಖಕರು ನಿರಂತರವಾಗಿ ಅನುವಾದಗೊಳ್ಳುತ್ತಿರುವುದಕ್ಕೆ ಅವರ ಕೃತಿಗಳಲ್ಲಿ ಅಡಗಿರುವ ಮನುಷ್ಯ ಸಹಜ ಬಂಡಾಯ ಧೋರಣೆ, ಬದುಕಿನ ಸಂಕಟವನ್ನು ಎದುರಿಸಲು ಬೇಕಾದ ಮನೋಬಲ ಯಾವುದು ಎಂಬುದರ ಹುಡುಕಾಟ, ಮಾನವ ಜೀವಿಯ ಒಡಲ ಸಂಕಟಗಳಿಗೆ ಮೂಲಭೂತ ಕಾರ್ಯಕಾರಣವನ್ನು ಅನ್ವೇಷಿಸುವಾಗ ಅವರು ತೋರುವ ಸಮಚಿತ್ತತೆ, ಅಧಿಕಾರ, ನಿಯಂತ್ರಣ, ಹಣ ಮತ್ತು ಪದವಿಗಳಿಂದ ಮನುಷ್ಯ ಅಹಂಕಾರಿಯಾಗಿ ಪತನಗೊಳ್ಳುವ ದಾರುಣತೆ ಮತ್ತು ದಯನೀಯತೆ ಇತ್ಯಾದಿಗಳು ಕಾರಣವಾಗಿರಬಹುದು. ಜತೆಗೆ, ಅವು ಎಲ್ಲ ಸಮಾಜಗಳಲ್ಲಿಯೂ ಪ್ರಸ್ತುತಗೊಳ್ಳಬಹುದಾದ ಮೌಲ್ಯ–ನೈತಿಕತೆಯನ್ನು ಅವರ ಕೃತಿಗಳು ಹೊಂದಿರಬಹುದು.

ಬರ್ಟೋಲ್ಟ್ ಬ್ರೆಕ್ಟ್ ಕವಿತೆ–ನಾಟಕಗಳಿಗಂತೂ ಮೇಲಿನ ಮಾತು ಹೆಚ್ಚು ಅನ್ವಯವಾಗುವಂತೆ ಕಾಣುತ್ತದೆ. ನಮ್ಮ ಕಾಲದ ಪ್ರಮುಖ ಸಾಹಿತಿಗಳಾದ ಪಿ.ಲಂಕೇಶ್, ಯು.ಆರ್.ಅನಂತಮೂರ್ತಿ, ಶಾ.ಬಾಲುರಾವ್, ಕೆ.ವಿ.ಸುಬ್ಬಣ್ಣ, ಎಚ್.ಎಸ್.ಶಿವಪ್ರಕಾಶ ಮುಂತಾದವರು ಬಿಡಿಯಾಗಿ, ಇಡಿಯಾಗಿ ಬ್ರೆಕ್ಟ್ ಅವರ ಬರಹವನ್ನು ಅನುವಾದಿಸಿದ್ದುಂಟು. ಅನಂತಮೂರ್ತಿಯವರ 'ಮತ್ತೆ ಮತ್ತೆ ಬ್ರೆಕ್ಟ್' ಅನುವಾದ ಸಮರ್ಪಕವಾಗಿಲ್ಲ ಎಂಬ ತಕರಾರಿನಲ್ಲಿ ವಸಂತ ಬನ್ನಾಡಿಯವರು ಕೆಲವು ಕವಿತೆಗಳನ್ನು ಸಂವಾದಿಯಾಗಿ ಮತ್ತೆ ಅನುವಾದಿಸಿರುವ ಉದಾಹರಣೆಯೂ ನಮ್ಮ ಮುಂದಿದೆ.

ಇರಲಿ, ಸದ್ಯದ ಬರವಣಿಗೆಯ ಉದ್ದೇಶ ಬ್ರೆಕ್ಟ್ ಕವಿತೆಗಳ ಅನುವಾದದ ಸಮಂಜಸತೆ, ಗುಣಾತ್ಮಕತೆ, ನಿಷ್ಠೆ, ಗದ್ಯಪದ್ಯ ಭಾವಗಳನ್ನು ನಿಕಷಕ್ಕೊಡ್ಡಿ ವಿಮರ್ಶೆ ಮಾಡುವುದಲ್ಲ. ಇಲ್ಲಿ ಬ್ರೆಕ್ಟ್ ಕವಿತೆಗಳ ಕುರಿತೇ ಮಾತನಾಡಿದರೂ ಸನ್ನಿವೇಶ ತುಸು ಬೇರೆ. ಕನ್ನಡದ ಹಿರಿಯ ಲೇಖಕರು, ಸಂಗ್ರಾಹಕರೂ, ಸಾಹಿತ್ಯ ಪ್ರಚಾರಕರೂ ಆದ ಸಿ.ಪಿ.ನಾಗರಾಜ್ ಅವರ ಹೊಸ ಪುಸ್ತಕವೂ ಬ್ರೆಕ್ಟ್ ಕುರಿತು ಆಗಿರುವುದೇ ಈಗಿನ ಮಾತುಗಳನ್ನು ಬರೆಯಲು ಪ್ರೇರಕವಾಗಿವೆ.

ಈ ಹಿಂದೆ ಕುವೆಂಪು ಅವರ ಕವಿತೆಗಳನ್ನು ಹಳಗನ್ನಡದ ಪದ್ಯಗಳನ್ನು, ಸರ್ವಜ್ಞರ ತ್ರಿಪದಿಗಳನ್ನು ತಮಗೊಗ್ಗುವ ರೀತಿಯಲ್ಲಿ ಸಿ.ಪಿ.ನಾಗರಾಜ್ ಅವರು ಪುಸ್ತಕದ ರೂಪದಲ್ಲಿ, ಆಡಿಯೋ–ವಿಡಿಯೋಗಳ ರೂಪದಲ್ಲಿ ವ್ಯಾಖ್ಯಾನಿಸಿರುವುದುಂಟು. ಒಂದು ಅರ್ಥದಲ್ಲಿ ಇದು ಹೊಸ ತಲೆಮಾರಿನ ಓದುಗರು ಉತ್ಸಾಹದಿಂದ ಸಾಹಿತ್ಯ ಅಧ್ಯಯನಕ್ಕೆ ತೊಡಗಿಕೊಳ್ಳುವಂತೆ ಮಾಡುವ ಪೂರಕ ಪ್ರಕ್ರಿಯೆ. "ಲೀಲೆಯಲ್ಲಿ ಯಾವುದೂ ವಿಫಲವಲ್ಲ" ಎನ್ನುವ ಕವಿ ಮಾತಿನಂತೆ ಎಂದೋ ಬಿತ್ತಿದ ಇಂಥ ಬೀಜಗಳು ಯಾವಾಗಲೋ ಚಿಗುರೊಡೆಯುವ ಗುಣವನ್ನು ಪಡೆದಿರುತ್ತವೆ. ವಿದ್ಯಾರ್ಥಿಗಳು, ಸಾಮಾನ್ಯ ಓದುಗರು ಇಂಥ ಪ್ರಕ್ರಿಯೆಗಳಿಂದ ಉತ್ತೇಜಿತರಾಗಿ ಗಂಭೀರ ಓದುಗರಾಗಿ ಪರಿವರ್ತನೆಗೊಳ್ಳುವ ಅಂಶವನ್ನು ಹೊಂದಿರುತ್ತವೆ.

ಸದ್ಯದ ಪುಸ್ತಕದಲ್ಲಿ ನಾಗರಾಜ್ ಅವರು ಕನ್ನಡದಲ್ಲಿ ಬೇರೆ ಬೇರೆ ಲೇಖಕರಿಂದ ಅನುವಾದಗೊಂಡ ಬ್ರೆಕ್ಟ್ ಅವರ ಹತ್ತೊಂಬತ್ತು ಕವಿತೆಗಳನ್ನು ಪದಪದಾರ್ಥದಲ್ಲಿ ವಿವರಿಸಲು ಯತ್ನಿಸಿದ್ದಾರೆ. 'ಹೀಗೆ ಕವಿತೆಗಳನ್ನು ಸೀಳಿ ಪ್ರತಿಪದವನ್ನು ವಾಗರ್ಥಕ್ಕೆ ಕಟ್ಟಿ ಹಾಕುವುದು ಎಷ್ಟರಮಟ್ಟಿಗೆ ಸರಿ' ಎಂಬ ಮಾತುಗಳು ನಮ್ಮ ಸುತ್ತ ಇರುವ ಎಚ್ಚರ ಕೂಡ ನಾಗರಾಜ್ ಅವರಿಗಿದೆ. ಇದ್ದರೂ ಈ ಬಗೆಯ ಉಪಕ್ರಮದ ಅಗತ್ಯವಿದ್ದೇ ಇರುತ್ತದೆ ಎಂಬ ನಂಬಿಕೆ ಅವರದ್ದು.

ಈ ವಿಶ್ವಾಸಕ್ಕೆ ಕಟಿಬದ್ಧರಾಗಿಯೇ ನಾಗರಾಜ್ ಅವರು ಬ್ರೆಕ್ಟ್ ಅವರ ಹತ್ತೊಂಬತ್ತು ಕವಿತೆಗಳನ್ನು ವಿವರಣೆಗೆ ಒಳಡಿಸಿದ್ದಾರೆ. ಅದಕ್ಕಾಗಿ, ಶಾ.ಬಾಲುರಾವ್, ಕೆ.ಫಣಿರಾಜ್, ಯು.ಆರ್.ಅನಂತಮೂರ್ತಿ, ಅಂಕುರ್ ಬೆಟಗೇರಿಯವರ ಅನುವಾದಗಳನ್ನು ಆಶ್ರಯಿಸಿದ್ದಾರೆ. ಹಾಗೆಂದು ಲಭ್ಯವಿರುವ ಅನುವಾದಿತ ಕವಿತೆಗಳಲ್ಲಿಯೇ 'ಇವು ಬ್ರೆಕ್ಟ್ ಪ್ರಾತಿನಿಧಿಕ ಕವಿತೆಗಳು' ಎಂದೇನೂ ತಿಳಿಯಬೇಕಿಲ್ಲ.

ಪ್ರತಿ ಕವಿತೆಯ ಉದ್ದೇಶ, ಧೋರಣೆ ಏನಾಗಿರಬಹುದು ಎಂಬ ಸಾಮಾನ್ಯ ಅಂಶವನ್ನು ಇಟ್ಟುಕೊಂಡು ಇಲ್ಲಿನ ಕವಿತೆಗಳನ್ನು ನಾಗರಾಜ್ ಅವರು ವಿವರಿಸಲು, ವಿಶ್ಲೇಷಣೆಗೆ ಒಳಪಡಿಸಲು ಯತ್ನಿಸಿದ್ದಾರೆ. ಆಯಾ ಕವಿತೆಯಲ್ಲಿ ಮುಖ್ಯವೆನ್ನಿಸುವ ಸಾಲುಗಳ ಸ್ವಾರಸ್ಯವನ್ನು ವಿವರಿಸಲು ಯತ್ನಿಸಿದ್ದಾರೆ. ಹೀಗೆ ಮಾಡುವಾಗ ಓದುಗರಿಗೆ ಈವರೆಗೂ ತಿಳಿದಿರದ ಸಂಗತಿಗಳು ಅರಿವಿಗೆ ಬರಬಹುದು. ಉದಾಹರಣೆಗೆ, 'ರೈತನಿಗೆ ತನ್ನ ಹೊಲದ್ದೇ ಚಿಂತೆ' ಎನ್ನುವ ಕವಿತೆಯಲ್ಲಿ ಕವಿತೆಯ ದೀರ್ಘ ವಿವರಣೆಯ ಜತೆಗೆ, ಎಂ.ಎಸ್. ಸ್ವಾಮಿನಾಥನ್ ಅವರ ವಿಚಾರಗಳ ಪ್ರಸ್ತಾಪವೂ ಇದೆ. ಇದರಿಂದಾಗಿ ಕವಿತೆಯ ವಿಶ್ಲೇಷಣೆಗೆ ಒಂದು ಭಾರತೀಯ ಸಂದರ್ಭ ಪ್ರಾಪ್ತವಾಗಿದೆ. ಅದೇ ರೀತಿ 'ಬೇಬಿಲಾನ್ ನಗರ', 'ಲೀಮಾ ನಗರ', 'ಚೀನಾದ ದೊಡ್ಡಗೋಡೆ', 'ಬೈಜಾಂಟಿಯಮ್' ಸಾಮ್ರಾಜ್ಯದ ವಿವರಣೆ; 'ಪುಸ್ತಕ ದಹನ' ಕವಿತೆಗೆ ನೀಡಿರುವ ಟಿಪ್ಪಣಿಗಳೂ. ಇಂತಹ ಅನೇಕ ಸಂಗತಿಗಳು ಕವಿತೆಗಳ ವಿಶ್ಲೇಷಣೆಯಲ್ಲಿ ದೊರಕುತ್ತವೆ. ಅದು ಹೊಸ ಓದುಗನಿಗೆ ಪ್ರಯೋಜನಕಾರಿಯೇ.

'ಫಿನ್ಲ್ಯಾಂಡ್-೧೯೪೦', 'ಕ್ರಿಟಿಕಲ್ ಧೋರಣೆಯ ಬಗ್ಗೆ', 'ಊರುಗೋಲುಗಳು' – ಕವಿತೆಗಳನ್ನು ಕುರಿತು ನೀಡಿರುವ ಟಿಪ್ಪಣಿಗಳು ಆಸಕ್ತಿದಾಯಕವಾಗಿವೆ. ಪ್ರತಿ ಪದಾರ್ಥ, ಸಾರಾಂಶ, ವ್ಯಾಖ್ಯಾನ, ವಿಶ್ಲೇಷಣೆಗಳ ಮೂಲಕ ಕಾವ್ಯವನ್ನು ಅರ್ಥ ಮಾಡಿಕೊಳ್ಳುವುದು ಕನ್ನಡಕ್ಕೆ ಹೊಸ ವಿಧಾನವೇನಲ್ಲ. ಹಳಗನ್ನಡದಲ್ಲಿ ಪರಿಣತಿ ಹೊಂದಿಲ್ಲದ, ಶ್ಲೇಷೆ, ಅಂತರ್ಗತ ಅರ್ಥ, ಛಂದಸ್ಸು, ಸಮಾಸ ಇತ್ಯಾದಿಗಳ ಕುರಿತು ಕ್ರಮಶಿಕ್ಷಣ ಪಡೆದಿರದ ಓದುಗ ವರ್ಗ ಇಂದಿಗೂ ಮೇಲೆ ಸೂಚಿಸಿದ ವಿಧಾನದಲ್ಲಿಯೇ ಕಾವ್ಯವನ್ನು ಅರಿತುಕೊಳ್ಳಲು ಯತ್ನಿಸುತ್ತಿದೆ.

ಸಿ.ಪಿ.ನಾಗರಾಜ್ ಅವರ ಈ ಪುಸ್ತಕದ ವಿಶೇಷತೆಯೆಂದರೆ ಬ್ರೆಕ್ಟ್‌ನಂತಹ ಆಧುನಿಕ ಕವಿಯ ಅನುವಾದಿತ ಕವಿತೆಗಳನ್ನು ಆ ವಿಧಾನದಲ್ಲಿ ಹೊಸ ಓದುಗರಿಗೆ ಪರಿಚಯಿಸಲು ಪ್ರಯತ್ನಿಸಿರುವುದು. ಆ ಮೂಲಕ ಬ್ರೆಕ್ಟ್ ಕಾವ್ಯಮನೋಧರ್ಮವನ್ನು ಅರಿಯಲು ಪ್ರಯತ್ನಿಸಿರುವುದು ಮತ್ತು ಅದರಲ್ಲಿ ಯಶಸ್ವಿಯಾಗಿರುವುದು.

**ಕೇಶವ ಮಳಗಿ**

# ನನ್ನ ನುಡಿ

ಕನ್ನಡಕ್ಕೆ ಅನುವಾದಗೊಂಡಿರುವ ಜರ್ಮನ್ ಕವಿ ಬರ್ಟೋಲ್ಟ್ ಬ್ರೆಕ್ಟ್ ಅವರ ಕವನಗಳಲ್ಲಿ ನನಗೆ ಮೆಚ್ಚುಗೆಯಾದ ಹತ್ತೊಂಬತ್ತು ಕವನಗಳನ್ನು ಆಯ್ದುಕೊಂಡು ಟಿಪ್ಪಣಿಯನ್ನು ಬರೆದಿದ್ದೇನೆ. ಈ ಕವನಗಳ ಓದು ಬರಹಕ್ಕೆ ಗುರುಗಳಾದ ಕೆ.ವಿ.ನಾರಾಯಣ ಅವರು ಮಾರ್ಗದರ್ಶನ ನೀಡಿದ್ದಾರೆ.

ಹತ್ತೊಂಬತ್ತು ಕಂತುಗಳಲ್ಲಿ ಈ ಕವನಗಳು ಅಂತರ್ ಜಾಲದಲ್ಲಿ ಮೂಡಿಬರುವ ಹೊನಲು ಮಿಂದಾಣದಲ್ಲಿ (honalu.net) ಪ್ರಕಟಗೊಂಡಿವೆ. ಹೊನಲು ಮಿಂದಾಣದ ಸಂಪಾದಕರು ಮತ್ತು ಓದುಗರು ಈ ಬರಹಗಳಿಗೆ ಉತ್ತೇಜನ ನೀಡಿದ್ದಾರೆ.

ಬ್ರೆಕ್ಟ್ ಕವನಗಳನ್ನು ನಾನು ಓದಲುತೊಡಗಿದಾಗ ಬ್ರೆಕ್ಟ್ ಅವರ ಅನುವಾದಿತ ಕವನ ಸಂಕಲನಗಳನ್ನು ಮತ್ತು ಇನ್ನಿತರ ಮೂಲಗಳಲ್ಲಿ ಪ್ರಕಟಗೊಂಡಿದ್ದ ಬ್ರೆಕ್ಟ್ ಕವನಗಳನ್ನು ನೀಡಿ ನನ್ನ ಬರಹಕ್ಕೆ ಗೆಳೆಯರಾದ ಆರ್.ಸುಧೀಂದ್ರ ಕುಮಾರ್ ಅವರು ನೆರವು ನೀಡಿದ್ದಾರೆ. ಕಥೆಗಾರರು ಮತ್ತು ಅನುವಾದಕರಾದ ಕೇಶವ ಮಳಗಿ ಅವರನ್ನು ಈ ಬರಹಕ್ಕೆ ಮುನ್ನುಡಿಯ ರೂಪದಲ್ಲಿ ತಮ್ಮ ಅನಿಸಿಕೆಯನ್ನು ತಿಳಿಸಬೇಕೆಂದು ಕೋರಿಕೊಂಡಾಗ, ನನ್ನ ಕೋರಿಕೆಯನ್ನು ಮನ್ನಿಸಿ, ನನ್ನ ಬರಹದಲ್ಲಿನ ಇತಿಮಿತಿಗಳನ್ನು ಗುರುತಿಸುವುದರ ಜತೆಗೆ ಉತ್ತೇಜನದ ನುಡಿಗಳನ್ನಾಡಿದ್ದಾರೆ.

ಬ್ರೆಕ್ಟ್ ಕವನಗಳನ್ನು ಕನ್ನಡಕ್ಕೆ ಅನುವಾದ ಮಾಡಿರುವ ಶಾ.ಬಾಲುರಾವ್, ಯು.ಆರ್.ಅನಂತಮೂರ್ತಿ, ಕೆ.ಫಣಿರಾಜ್ ಮತ್ತು ಅಂಕುರ್ ಬೆಟಗೇರಿ ಅವರ

ಕವನ ಸಂಕಲನಗಳಿಂದ ೧೯ ಕವನಗಳನ್ನು ಆಯ್ಕೆ ಮಾಡಿಕೊಂಡಿದ್ದೇನೆ.

ಈ ಬರಹದ ಕರಡು ಪ್ರತಿಯನ್ನು ಓದಿದ ನನ್ನ ಗುರುಹಿರಿಯರು ಮತ್ತು ಗೆಳೆಯರು ಮೆಚ್ಚುಗೆಯ ನುಡಿಗಳನ್ನಾಡಿದ್ದಾರೆ. ನನ್ನೆಲ್ಲಾ ಬರಹದ ಮೊದಲ ಓದುಗಳಾದ ನನ್ನ ಹೆಂಡತಿ ಗಾಯತ್ರಿ ತನ್ನ ಅನಿಸಿಕೆಗಳನ್ನು ತಿಳಿಸಿದ್ದಾಳೆ.

ಬ್ರೆಕ್ಟ್ ಕವನಗಳ ಓದಿಗೆ ನೆರವಾದ ಗುರುಹಿರಿಯರಿಗೆ, ಗೆಳೆಯರಿಗೆ, ಅನುವಾದಕರಿಗೆ, ಸಂಪಾದಕ ವರ್ಗದವರಿಗೆ, ಮುನ್ನುಡಿಯನ್ನು ಬರೆದ ಗೆಳೆಯರಾದ ಕೇಶವ ಮಳಗಿ ಅವರಿಗೆ ಮತ್ತು ಮುಖಪುಟವನ್ನು ಸಿದ್ಧಪಡಿಸಿದ ಗೆಳೆಯರಾದ ಓಂಶಿವಪ್ರಕಾಶ್ ಅವರಿಗೆ ನನ್ನ ವಂದನೆಗಳನ್ನು ಸಲ್ಲಿಸುತ್ತೇನೆ.

ಸಿ ಪಿ **ನಾಗರಾಜ**
ಬೆಂಗಳೂರು

## ಕವನಗಳ ಓದಿಗೆ ನೆರವಾದ ಪುಸ್ತಕಗಳು

೧. ಶಾ.ಬಾಲುರಾವ್ (ಅನುವಾದಕರು )
**ಬೆರ್ಟೋಲ್ಟ್ ಬ್ರೆಷ್ಟ್: ಎಂಬತ್ತು ಕವಿತೆಗಳು**
ಅಕ್ಷರ ಪ್ರಕಾಶನ, ಹೆಗ್ಗೋಡು (ಸಾಗರ)
ಕರ್ನಾಟಕ–೫೭೭೪೧೭
ಪ್ರಕಟಣೆ:೧೯೯೪

೨. ಅಂಕುರ್ ಬೆಟಗೇರಿ (ಅನುವಾದಕರು)
**ಇದರ ಹೆಸರು**
ಅಭಿನವ ಪ್ರಕಾಶನ, ವಿಜಯನಗರ
ಬೆಂಗಳೂರು–೫೬೦೦೪೦
ಪ್ರಕಟಣೆ: ೨೦೦೬

೩. ಯು.ಆರ್.ಅನಂತಮೂರ್ತಿ (ಅನುವಾದಕರು)
**ಮತ್ತೆ ಮತ್ತೆ ಬ್ರೆಕ್ಟ್**
ಅಹರ್ನಿಶಿ ಪ್ರಕಾಶನ, ವಿದ್ಯಾನಗರ
ಶಿವಮೊಗ್ಗ–೫೭೭೨೦೩
ಪ್ರಕಟಣೆ:೨೦೦೯

೪. ಕೆ.ಫಣಿರಾಜ್ (ಅನುವಾದಕರು)
**ಬ್ರೆಕ್ಟನ ಸಮಾಜವಾದ : ಆಯ್ದ ಪದ್ಯಗಳು**
ಲಂಕೇಶ್ ಪ್ರಕಾಶನ
ಬಸವನ ಗುಡಿ
ಬೆಂಗಳೂರು–೫೬೦೦೦೪
ಪ್ರಕಟಣೆ :೨೦೧೫

೫. ಎಚ್.ಕೆ.ರಾಮಚಂದ್ರಮೂರ್ತಿ
**ಬ್ರೆಕ್ಟ್**
ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು–೫೭೦೦೦೬
ಪ್ರಕಟಣೆ : ೧೯೭೮

೬. ಕೆ.ಕೇಶವಶರ್ಮ
**ಬರ್ಟೋಲ್ಟ್ ಬ್ರೆಕ್ಟ್**
ಸೃಷ್ಟಿ ಪ್ರಕಾಶನ, ವಿಜಯನಗರ
ಬೆಂಗಳೂರು–೫೬೦೦೪೦
ಪ್ರಕಟಣೆ:೨೦೨೩.

(ಇಂಗ್ಲಿಶ್ ಲಿಪಿಯಲ್ಲಿರುವ **BERTOLT BRECHT** ಎಂಬ ಜರ್ಮನ್ ಕವಿಯ ಹೆಸರನ್ನು ಕನ್ನಡದಲ್ಲಿ **ಬೆರ್ಟೋಲ್ಟ್ ಬ್ರೆಷ್ಟ್ / ಬರ್ಟೋಲ್ಟ್ ಬ್ರೆಕ್ಟ್** ಎಂಬ ಎರಡು ರೂಪಗಳಲ್ಲಿಯೂ ಉಚ್ಚರಿಸುತ್ತಾರೆ.)

# ಪರಿವಿಡಿ

## ಕವಿಯ ಜೀವನದ ವಿವರ

**ಪೂರ್ಣ ಹೆಸರು** : ಯುಜಿನ್ ಬರ್ಟೋಲ್ಟ್ ಫ್ರೆಡರಿಕ್ ಬ್ರೆಕ್ಟ್

**ಜೀವಿತ ಕಾಲ** : ಕ್ರಿ.ಶ.1898 ರಿಂದ ಕ್ರಿ.ಶ.1956

**ಹುಟ್ಟಿದ ಊರು** : ಆಗ್ಸ್ ಬರ್ಗ್, ಬವೇರಿಯ ಪ್ರಾಂತ್ಯ, ಜರ್ಮನಿ.

**ತಾಯಿ** : ಸೋಫಿ ಬ್ರೆಜಿಂಗ್

**ತಂದೆ** : ಬರ್ಟೋಲ್ಟ್ ಬ್ರೆಕ್ಟ್

**ವಿದ್ಯೆ** : ವೈದ್ಯಕೀಯ ವಿಜ್ಞಾನದಲ್ಲಿ ಪದವಿ

**ಕಸುಬು** : ಜರ್ಮನ್ ನುಡಿಯಲ್ಲಿ ಕತೆ, ಕವನ, ನಾಟಕಗಳ ರಚನೆ, ನಾಟಕಗಳ ನಿರ್ದೇಶನ ಮತ್ತು ಪತ್ರಿಕೋದ್ಯಮ.

**ಸಾಹಿತ್ಯ ರಚನೆ** : 1200ಕ್ಕಿಂತ ಹೆಚ್ಚಿನ ಕವನಗಳ ರಚನೆ. ಇದರಲ್ಲಿ ನಾಟಕಗಳಿಗಾಗಿ ರಚಿಸಿದ ರಂಗಗೀತೆಗಳು ಸೇರಿವೆ.

**45 ನಾಟಕಗಳು.** : ದಿ ಲೈಫ್ ಆಫ್ ಗೆಲಿಲಿಯೊ
ದಿ ಕಕೇಶಿಯನ್ ಚಾಕ್ ಸರ್ಕಲ್
ತ್ರೀ ಪೆನ್ನಿ ಅಪೇರಾ
ಮದರ್ ಕರೇಜ್ ಅಂಡ್ ಹರ್ ಚಿಲ್ಡ್ರನ್

ಎಂಬ ಈ ನಾಲ್ಕು ನಾಟಕಗಳು ಪ್ರಪಂಚದ ಎಲ್ಲೆಡೆಯಲ್ಲಿಯೂ ಒಳ್ಳೆಯ ನಾಟಕಗಳೆಂದು ಹೆಸರನ್ನು ಪಡೆದಿವೆ.

ಜರ್ಮನಿಯಲ್ಲಿ ಅಡಾಲ್ಫ್ ಹಿಟ್ಲರನ ಆಡಳಿತದ ಕಾಲದಲ್ಲಿ (ಕ್ರಿಶ ೧೯೩೩–೧೯೪೫) ನಡೆಯುತ್ತಿದ್ದ ಜನಾಂಗೀಯ ದಾಳಿಯಲ್ಲಿ ಯಹೂದಿಗಳ ಮೇಲೆ ಹಲ್ಲೆ,

ಕೊಲೆ, ಸುಲಿಗೆ ಹೆಚ್ಚಾಗಿದ್ದವು. ಹಿಟ್ಲರನ ನಿರಂಕುಶ ಆಡಳಿತದ ವಿರುದ್ಧವಾಗಿ ಜನರಲ್ಲಿ ಎಚ್ಚರವನ್ನು ಮೂಡಿಸುತ್ತಿದ್ದ ಬರಹಗಾರರ ಪುಸ್ತಕಗಳನ್ನು ಬಹಿರಂಗವಾಗಿ ಸುಟ್ಟು, ಬರಹಗಾರರನ್ನು ಸೆರೆಮನೆಗೆ ತಳ್ಳುವ ಇಲ್ಲವೇ ಕೊಲ್ಲುವ ಯೋಜನೆಯನ್ನು ನಾಜಿ ಸರ್ಕಾರ ಹಾಕಿಕೊಂಡಿತ್ತು. ಈ ಪಟ್ಟಿಯಲ್ಲಿ ಯಹೂದಿ ಜನಸಮುದಾಯಕ್ಕೆ ಸೇರಿದ್ದ ಬ್ರೆಕ್ಟ್ ಅವರು ಹೆಸರು ಇತ್ತು.

ಹಿಟ್ಲರನ ಕೆಂಗಣ್ಣಿಗೆ ಗುರಿಯಾಗಿದ್ದ ಬ್ರೆಕ್ಟ್ ಅವರು ಕ್ರಿ.ಶ.೧೯೩೩ ರಲ್ಲಿ ಬರ್ಲಿನ್ ನಗರವನ್ನು ತೊರೆದು ದೇಶಾಂತರವಾಸಿಯಾಗಿ ಆಸ್ಟ್ರಿಯಾ, ಡೆನ್ಮಾರ್ಕ್, ಸ್ವೀಡನ್, ಫಿನ್ಲ್ಯಾಂಡ್, ಸ್ವಿಟ್ಜರ್‌ಲ್ಯಾಂಡ್, ಫ್ರಾನ್ಸ್‌ಗಳಲ್ಲಿ ಕೆಲವು ವರುಶಗಳ ಕಾಲ ಇದ್ದು, ೧೯೪೧ರಲ್ಲಿ ಅಮೆರಿಕ ದೇಶಕ್ಕೆ ಬಂದು ನೆಲೆಸಿದರು. ಹಿಟ್ಲರ್‌ನ ಮರಣದ ನಂತರ, ಅಮೆರಿಕ ದೇಶದಿಂದ ಯುರೋಪಿಗೆ ೧೯೪೭ರಲ್ಲಿ ಹಿಂತಿರುಗಿ ಬಂದು, ಎರಡನೆಯ ಮಹಾಯುದ್ಧದ ನಂತರ ಪೂರ್ವ ಮತ್ತು ಪಶ್ಚಿಮ ಎಂದು ಇಬ್ಬಾಗಗೊಂಡಿದ್ದ ಜರ್ಮನ್ ದೇಶದ ಪೂರ್ವ ಜರ್ಮನಿಯ ಬರ್ಲಿನ್ ನಗರದಲ್ಲಿ ನೆಲೆಗೊಂಡು ೧೯೫೬ರಲ್ಲಿ ಮರಣ ಹೊಂದುವ ತನಕ ರಂಗ ಚಟುವಟಿಕೆಯಲ್ಲಿ ತೊಡಗಿದ್ದರು.

# ೧. ಸಕಲ ಸೌಕರ್ಯಗಳಿದ್ದ ವಾಹನದಲ್ಲಿ ಪ್ರವಾಸ ಮಾಡುತ್ತಿದ್ದಾಗ

**ಅನುವಾದ: ಶಾ.ಬಾಲುರಾವ್**

ಸಕಲ ಸೌಕರ್ಯಗಳಿದ್ದ ವಾಹನದಲ್ಲಿ ಕೂತು
ಹಳ್ಳಿಗಾಡಿನ ಮಳೆಗಾಲದ ರಸ್ತೆಯಲ್ಲಿ
ಪ್ರವಾಸ ಮಾಡುತ್ತಿದ್ದಾಗ
ಒಂದು ಇಳಿಸಂಜೆಯ ವೇಳೆ
ಒಬ್ಬ ಚಿಂದಿ ತೊಟ್ಟ ಮನುಷ್ಯ ಕಣ್ಣಿಗೆ ಬಿದ್ದ
**"ನನ್ನನ್ನೂ ಕರಕೊಂಡು ಹೋಗಿ"** ಎಂದು ಅವನು ತಲೆಬಾಗಿ ಕೈಬೀಸಿದ.

ಮೇಲೆ ಮುಚ್ಚಿಗೆಯಿತ್ತು. ಒಳಗೆ ಜಾಗವಿತ್ತು.
ಆದರೂ ಅವನನ್ನು ಬಿಟ್ಟು ಮುಂದೆ ಹೋದೆವು.
**'ಇಲ್ಲ, ನಾವು ಯಾರನ್ನೂ ನಮ್ಮ ಜತೆ ಕರಕೊಂಡು ಹೋಗೋಕ್ಕಾಗೊಲ್ಲ'**
ಎಂದು ನಾನು ಸಿಡುಕಿ ಹೇಳಿದ್ದು ಎಲ್ಲರಿಗೂ ಕೇಳಿಸಿತು.

ಇದ್ದಕ್ಕಿದ್ದಂತೆ ನಾನೇ ನನ್ನ ಆ ದನಿಗೆ ಬೆಚ್ಚಿಬಿದ್ದಾಗ
ನಾವಾಗಲೇ ತುಂಬ ದೂರ ಹೋಗಿದ್ದೆವು.
ಪ್ರಾಯಶಃ ಒಂದು ದಿನದ ಪ್ರಯಾಣದಷ್ಟೇನೊ.

ಇದು ನನ್ನ ವರ್ತನೆ
ಮತ್ತು
ಇದು ನಮ್ಮ ಇಡೀ ಪ್ರಪಂಚ.

**ಮಾನವ ಸಮುದಾಯದ ಬದುಕಿನಲ್ಲಿ ಬಡವರ ಸಂಕಟಕ್ಕೆ ಸಿರಿವಂತರು ಮರುಗುವುದಿಲ್ಲ ಮತ್ತು ನೆರವಾಗುವುದಿಲ್ಲ ಎಂಬ ವಾಸ್ತವವನ್ನು ಪ್ರಸಂಗವೊಂದರ ಮೂಲಕ ಈ ಕವನದಲ್ಲಿ ಹೇಳಲಾಗಿದೆ.**

'ಬಡವರು' ಎಂದರೆ ಮಾನವ ಜೀವಿಯು ಉಳಿದು ಬೆಳೆದು ಬಾಳಲು ಅತ್ಯಗತ್ಯವಾದ ಅನ್ನ, ಬಟ್ಟೆ, ವಸತಿ, ವಿದ್ಯೆ, ಆರೋಗ್ಯದಿಂದ ವಂಚಿತರಾಗಿ ಜೀವನವಿಡೀ ನರಳುತ್ತಿರುವ ದುಡಿಯುವ ಶ್ರಮಜೀವಿಗಳು;

'ಸಿರಿವಂತರು' ಎಂದರೆ ದೊಡ್ಡ ಪ್ರಮಾಣದಲ್ಲಿ ಆಸ್ತಿ, ಹಣ, ಒಡವೆ, ವಸ್ತುಗಳನ್ನು ಹೊಂದಿರುವವರು.

ಸಕಲ=ಎಲ್ಲ/ಸಮಸ್ತ; ಸೌಕರ್ಯ=ಅನುಕೂಲ; ವಾಹನ=ಕಾರು/ಮೋಟಾರು; ಇಳಿಸಂಜೆಯ ವೇಳೆ=ರವಿಯು ಪಶ್ಚಿಮದ ದಿಕ್ಕಿನಲ್ಲಿ ಮರೆಯಾಗುವ ಸಮಯ; ಚಿಂದಿ ತೊಟ್ಟ ಮನುಷ್ಯ=ಉಣಲು/ಉಡಲು/ತೊಡಲು ಸಾಕಷ್ಟು ಇಲ್ಲದ ಬಡವನಾದ ವ್ಯಕ್ತಿ; ಕಣ್ಣಿಗೆ ಬಿದ್ದ=ಕಾಣಿಸಿಕೊಂಡ/ಕಂಡು ಬಂದ; ತಲೆಬಾಗಿ=ಅತಿ ವಿನಯದಿಂದ ಕುಗ್ಗಿ; ಕೈಬೀಸಿದ=ತನ್ನನ್ನು ಕಾರಿನಲ್ಲಿ ಕರೆದುಕೊಂಡು ಹೋಗುವಂತೆ ಮೊರೆಯಿಡುತ್ತ, ಸಾಗುತ್ತಿರುವ ಕಾರಿಗೆ ಅಡ್ಡಲಾಗಿ ಕಯ್ ಒಡ್ಡಿದ;

ಮುಚ್ಚಿಗೆ=ಕಾರಿನಲ್ಲಿ ಕುಳಿತವರು ಗಾಳಿ, ಬಿಸಿಲು, ಚಳಿ ಮತ್ತು ಮಳೆಗೆ ಸಿಲುಕದಂತೆ ಕಾರಿಗೆ ಹಾಕಿರುವ ಮೇಲಿನ ಲೋಹದ ಹೊದಿಕೆ; ಒಳಗೆ ಜಾಗವಿತ್ತು=ಕಾರಿನಲ್ಲಿ ಇನ್ನೂ ಹಲವರು ಕುಳಿತುಕೊಂಡು ಪಯಣಿಸಲು ಜಾಗವಿತ್ತು. ಅಂದರೆ ಕಾರಿನಲ್ಲಿ ಕೆಲವು ಸೀಟುಗಳು ಖಾಲಿಯಿದ್ದವು; ಸಿಡುಕು=ಕೋಪದಿಂದ ಕೆರಳಿ/ಅಸಹನೆಯಿಂದ ಕೂಡಿ; ಬೆಚ್ಚಿಬೀಳು=ಆತಂಕ ಮತ್ತು ಹೆದರಿಕೆಯಿಂದ ದೇಹ ಕಂಪಿಸುವುದು;

**ಇದ್ದಕ್ಕಿದ್ದಂತೆ ನಾನೇ ನನ್ನ ಆ ದನಿಗೆ ಬೆಚ್ಚಿಬಿದ್ದೆ**=ಬಡವನ ಬೇಡಿಕೆಯನ್ನು ಮನಸ್ಸಿಗೆ ಹಾಕಿಕೊಳ್ಳದೆ, ಅದನ್ನು ನಿರಾಕರಿಸುತ್ತ ಕಾರಿನ ಒಡೆಯನಾದ ನಾನು ಆಡಿದ ಮಾತಿಗೆ ಮತ್ತು ಮಾತನ್ನಾಡುವಾಗ ನನ್ನ ದನಿಯಲ್ಲಿದ ಆಕ್ರೋಶ ಹಾಗೂ ತಿರಸ್ಕಾರದ ಒಳಮಿಡಿತವನ್ನು ಗಮನಿಸಿ, ನಾನೇ ಕಂಪಿಸಿದೆ; ಏಕೆಂದರೆ ನನಗೆ ಅರಿವಿಲ್ಲದಂತೆಯೇ ಸಿರಿವಂತಿಕೆಯ ಅಹಂಕಾರ ಮತ್ತು ಬಡವರ ಬಗ್ಗೆ ಇರುವ ತಿರಸ್ಕಾರ ಇಂತಹ ವರ್ತನೆಗೆ ಕಾರಣವಾಗಿತ್ತು; ಪ್ರಾಯಶಃ=ಸುಮಾರು; ವರ್ತನೆ=ನಡೆನುಡಿ;

**ಇದು ನನ್ನ ವರ್ತನೆ**= ಚಿಂದಿಯುಟ್ಟ ವ್ಯಕ್ತಿಯು ಮಳೆಗಾಲದ ಇಳಿಸಂಜೆಯಲ್ಲಿ

ಒಬ್ಬನೇ ನಡೆದುಕೊಂಡು ಹೋಗುತ್ತಿದ್ದಾನೆ. ಇಂತಹ ಚಳಿ ಮಳೆಯಲ್ಲಿ ಆತನು ಯಾವ ಬಗೆಯ ಸಂಕಟಕ್ಕೆ ಒಳಗಾಗಿರಬಹುದು ಎಂಬ ಆಲೋಚನೆಯಾಗಲಿ ಇಲ್ಲವೇ ಕಾರಿನಲ್ಲಿ ಮತ್ತೊಬ್ಬರು ಕುಳಿತುಕೊಳ್ಳಲು ಜಾಗವಿರುವಾಗ, ಆತನನ್ನು ಜತೆಯಲ್ಲಿ ಕರೆದುಕೊಂಡು ಹೋಗೋಣ ಎಂಬ ಕರುಣೆಯಾಗಲಿ ಕಾರಿನ ಒಡೆಯನಾದ ನನ್ನ ಮನದಲ್ಲಿ ಮಿಡಿಯಲಿಲ್ಲ. ಇದಕ್ಕೆ ಬದಲಾಗಿ ಚಿಂದಿಯುಟ್ಟ ವ್ಯಕ್ತಿಯ ದನಿಯನ್ನು ಕೇಳಿ ಕುಪಿತಗೊಂಡು, ಒರಟು ದನಿಯಲ್ಲಿ **"ಇಲ್ಲ, ನಾವು ಯಾರನ್ನೂ ನಮ್ಮ ಜತೆ ಕರಕೊಂಡು ಹೋಗೋಕ್ಕಾಗೊಲ್ಲ"** ಎಂದು ನುಡಿದೆ; ಬಡವನ ಕೋರಿಕೆಯನ್ನು ಮನ್ನಿಸದ, ಬಡವನಿಗೆ ಕರುಣೆಯನ್ನು ತೋರಿಸದ, ಬಡವನ ದನಿಯನ್ನು ಕೇಳುತ್ತಿದ್ದಂತೆಯೇ ಕುಪಿತನಾಗುವ ಕ್ರೂರತನದ ನಡೆ ನುಡಿಯು ನನ್ನ ವ್ಯಕ್ತಿತ್ವದಲ್ಲಿದೆ; ಇದು=ತಿರಸ್ಕಾರದಿಂದ ಕೂಡಿದ ಕರುಣೆಯಿಲ್ಲದ ನಡೆನುಡಿ; ಇಡೀ=ಎಲ್ಲವನ್ನೂ ಒಳಗೊಂಡು; ಪ್ರಪಂಚ=ಲೋಕ/ಜಗತ್ತು/ಮಾನವ ಸಮುದಾಯ;

**ಇದು ನಮ್ಮ ಇಡೀ ಪ್ರಪಂಚ**=ಕಾರಿನ ಒಡೆಯನ ನಡೆನುಡಿಯಂತೆಯೇ ಪ್ರಪಂಚದಲ್ಲಿರುವ ಸಿರಿವಂತರಲ್ಲಿ ಬಹುತೇಕ ಮಂದಿ ಬಡವರ ಬಗ್ಗೆ ಇದೇ ರೀತಿಯಲ್ಲಿ ನಡೆದುಕೊಳ್ಳುತ್ತಾರೆ. ಬಡತನದ ಬೇಗೆಯಲ್ಲಿ ಬೇಯುತ್ತಿರುವ ವ್ಯಕ್ತಿಗಳು ಬದುಕಿ ಉಳಿಯುವುದಕ್ಕೆ ಅಗತ್ಯವಾದ ಏನನ್ನಾದರೂ ಬೇಡಿದಾಗ, ಸಿರಿವಂತರು ತಮಗಿರುವ ಅನುಕೂಲಗಳಲ್ಲಿ ಸ್ವಲ್ಪವನ್ನಾದರೂ, ಅದರ ಅಗತ್ಯವಿರುವವರಿಗೆ ನೆರವಿನ ರೂಪದಲ್ಲಿ ನೀಡಬೇಕು ಎನ್ನುವ ಉದಾರವಾದ ಮನಸ್ಸನ್ನು ಸಿರಿವಂತರಲ್ಲಿ ಬಹುತೇಕ ಮಂದಿ ಹೊಂದಿಲ್ಲ;

ಈ ಕವನದಲ್ಲಿ ಕಂಡುಬರುವ ಕಾರಿನ ಒಡೆಯ ಮತ್ತು ಚಿಂದಿಯುಟ್ಟ ವ್ಯಕ್ತಿಯ ಪ್ರಸಂಗದ ಮೂಲಕ 'ಸಿರಿವಂತರಲ್ಲಿ ಕರುಣೆಯಿಲ್ಲದ ವ್ಯಕ್ತಿತ್ವ ರೂಪುಗೊಳ್ಳಲು ಕಾರಣಗಳೇನು' ಎಂಬುದನ್ನು ತಿಳಿಯಬೇಕು.

ನಮ್ಮ ಕಣ್ಣ ಮುಂದಿನ ಜಗತ್ತಿನ ಎಲ್ಲ ದೇಶಗಳಲ್ಲಿಯೂ ಮತ್ತು ಎಲ್ಲ ಸಮಾಜಗಳಲ್ಲಿಯೂ ಸಿರಿವಂತರ ಸಂಕೆಗಿಂತ ಬಡವರ ಸಂಕೆಯು ಹೆಚ್ಚಾಗಿರಲು ಕಾರಣವೇನೆಂದರೆ "ಆಸ್ತಿಯ ಹಕ್ಕನ್ನುಳ್ಳ ಸಂಪತ್ತಿನ ವ್ಯವಸ್ಥೆ ಮತ್ತು ಮೇಲು ಕೀಳಿನ ತಾರತಮ್ಯದಿಂದ ಕೂಡಿರುವ ಜಾತಿ/ಮತದ ಸಾಮಾಜಿಕ ವ್ಯವಸ್ಥೆ."

ಈ ಎರಡು ವ್ಯವಸ್ಥೆಗಳಿಂದಾಗಿ ಮೇಲು ಜಾತಿ/ಮತದ ಬಲ, ತೋಳ್ ಬಲ, ಹಣಬಲ ಮತ್ತು ಆಡಳಿತದ ಗದ್ದುಗೆಯ ಬಲವುಳ್ಳ ಕೆಲವೇ ಜನರು, ಈ

ಬಲಗಳಲ್ಲಿದ ದುಡಿಯುವ ಶ್ರಮಜೀವಿಗಳನ್ನು ಶಾರೀರಿಕವಾಗಿ ಮತ್ತು ಮಾನಸಿಕವಾಗಿ ಹತೋಟಿಯಲ್ಲಿಟ್ಟುಕೊಂಡು, ಜಗತ್ತಿನಲ್ಲಿ ಉತ್ಪಾದನೆಗೊಳ್ಳುವ ಸಂಪತ್ತನ್ನು ದೋಚುತ್ತಿದ್ದಾರೆ. ಆದ್ದರಿಂದಲೇ ಪ್ರಪಂಚದ ಯಾವುದೇ ದೇಶದಲ್ಲಿ ಇಲ್ಲವೇ ಸಮಾಜದಲ್ಲಿ ಬಹು ದೊಡ್ಡ ಪ್ರಮಾಣದಲ್ಲಿ ಸಂಪತ್ತನ್ನು ಹೊಂದಿರುವ ಸಿರಿವಂತರಿಗಿಂತ, ಅಲ್ಪಸ್ವಲ್ಪ ಸಂಪತ್ತನ್ನು ಹೊಂದಿ ಇತ್ತ ಸಿರಿವಂತರಲ್ಲದ ಅತ್ತ ಬಡವರಲ್ಲದ ನಡುವಣ ವರ್ಗದವರ (middle class) ಮತ್ತು ಯಾವುದೇ ಸಂಪತ್ತನ್ನು ಹೊಂದಿರದ ಬಡವರ ಸಂಕೆಯು ಕೋಟಿಗಟ್ಟಲೆ ಹೆಚ್ಚಾಗಿದೆ. ಸರಿ ಸುಮಾರು ೭೫೦ ಕೋಟಿಗಿಂತಲೂ ಹೆಚ್ಚಿನ ಜನರಿಂದ ಕೂಡಿರುವ ಪ್ರಪಂಚದಲ್ಲಿ ಅತ್ಯಂತ ದೊಡ್ಡ ಪ್ರಮಾಣದ ಸಂಪತ್ತನ್ನು ಹೊಂದಿರುವ ಮೊದಲ ನೂರು ಮಂದಿಯ ಹೆಸರನ್ನು ಆಗಾಗ್ಗೆ ಪತ್ರಿಕೆಗಳು ಪ್ರಕಟಿಸುತ್ತಿರುತ್ತವೆ. ಪ್ರಪಂಚದ ಸಮಸ್ತ ಸಂಪತ್ತಿನಲ್ಲಿ ಬಹು ದೊಡ್ಡ ಪಾಲು ಬೆರಳೆಣಿಕೆಯ ಸಂಕೆಯ ಸಿರಿವಂತರ ಕಯ್ ವಶದಲ್ಲಿರುವುದು ಈ ವರದಿಯಿಂದ ಕಂಡುಬರುತ್ತದೆ.

ಸಿರಿವಂತರು ಹೊಂದಿರುವ ಸಂಪತ್ತೆಲ್ಲವೂ ಭೂಮಿಯಲ್ಲಿ ದುಡಿಯುತ್ತಿರುವ ಶ್ರಮಜೀವಿಗಳಿಂದ ಉತ್ಪನ್ನಗೊಂಡಿದ್ದಾಗಿದೆ. ಯಾವೊಬ್ಬ ಸಿರಿವಂತನೂ ತಾನು ಈ ಜಗತ್ತಿನಲ್ಲಿ ಹುಟ್ಟಿಬರುವಾಗ ತನ್ನ ಜತೆಯಲ್ಲಿ ಯಾವ ಸಂಪತ್ತನ್ನು ಹೊತ್ತು ತಂದಿಲ್ಲ. ಅವನು ಹೊಂದಿರುವುದೆಲ್ಲ ಈ ಜಗತ್ತಿಗೆ ಸೇರಿದ್ದೇ ಆಗಿದ್ದೆ. ಜಗತ್ತಿನಲ್ಲಿ ಹುಟ್ಟಿ ಬೆಳೆದು ಬಾಳುವ ಪ್ರತಿಯೊಬ್ಬ ವ್ಯಕ್ತಿಯು ಅನ್ನ–ಬಟ್ಟೆ–ವಸತಿ–ವಿದ್ಯೆ–ಉದ್ಯೋಗ–ಆರೋಗ್ಯವನ್ನು ಪಡೆದು ನೆಮ್ಮದಿಯ ಜೀವನವನ್ನು ನಡೆಸುವುದಕ್ಕೆ ಪ್ರಪಂಚದಲ್ಲಿರುವ ನಿಸರ್ಗ ಸಂಪತ್ತು ಮತ್ತು ಮಾನವ ಸಮುದಾಯದ ದುಡಿಮೆಯಿಂದ ಉತ್ಪಾದನೆಗೊಳ್ಳುವ ಸಂಪತ್ತು ಸರಿ ಸಮಾನವಾಗಿ ಎಲ್ಲರಿಗೂ ಸಲ್ಲಬೇಕಾಗಿದೆ. ಉದಾಹರಣೆ: ಒಂದು ಮನೆಯಲ್ಲಿ ವಾಸಿಸುತ್ತಿರುವ ಒಂದೇ ಕುಟುಂಬಕ್ಕೆ ಸೇರಿದ ನಾಲ್ಕು ಮಂದಿಗೆ ಮಾಡಿದ ಅಡುಗೆಯನ್ನು ಎಲ್ಲರೂ ಸೇವಿಸಬೇಕೆ ಹೊರತು, ಒಬ್ಬ ಹೊಟ್ಟೆ ಬಿರಿಯುವಂತೆ ಉಂಡು, ಮತ್ತೊಬ್ಬ ಅರೆಹೊಟ್ಟೆ ಉಂಡು, ಇನ್ನುಳಿದ ಇಬ್ಬರು ಹಸಿವಿನಿಂದ ನರಳುತ್ತಿದ್ದರೆ ಅದು ಮನೆ ಎನಿಸುವುದಿಲ್ಲ; ಅದು ಕುಟುಂಬವಾಗುವುದಿಲ್ಲ;

ಮಾನವ ಸಮುದಾಯದಲ್ಲಿರುವ ಧಾರ್ಮಿಕ ನಂಬಿಕೆಗಳು ಸಿರಿತನ ಮತ್ತು ಬಡತನದ ಅಸಮಾನತೆಯು ಸದಾಕಾಲ ಮುಂದುವರಿಯಲು ಕಾರಣವಾಗಿವೆ.

ಪ್ರತಿಯೊಬ್ಬ ವ್ಯಕ್ತಿಯ ಬಡತನ ಇಲ್ಲವೇ ಸಿರಿತನಕ್ಕೆ ಆಯಾಯ ವ್ಯಕ್ತಿಯು ತನ್ನ

ಹಿಂದಿನ ಜನ್ಮದಲ್ಲಿ ಮಾಡಿರುವ ಒಳಿತು ಕೆಡುಕಿನ ನಡೆನುಡಿಯೇ ಕಾರಣವೆಂಬ ಪೂರ್ವಜನ್ಮದ ಕರ್ಮಸಿದ್ಧಾಂತ ಮತ್ತು ಪ್ರತಿಯೊಬ್ಬ ವ್ಯಕ್ತಿಯು ಹುಟ್ಟಿದಾಗಲೇ ಆತನ/ಆಕೆಯ ಹಣೆಯಲ್ಲಿ ಹುಟ್ಟಿನಿಂದ ಸಾವಿನ ತನಕ ಏನೇನು ಆಗಬೇಕೆಂಬುದನ್ನು ದೇವರು ಬರೆದಿದ್ದಾನೆ. ಆದ್ದರಿಂದ ಹಣೆ ಬರಹ/ವಿಧಿ ಬರಹದಂತೆಯೇ ಬಡತನ/ಸಿರಿತನ ವ್ಯಕ್ತಿಗೆ ಬರುತ್ತದೆ ಎಂಬ ನಂಬಿಕೆಯನ್ನು ಮೇಲು ಜಾತಿ ಮತ್ತು ಮೇಲು ವರ್ಗದ ಜನರಿಂದ ರಚನೆಗೊಂಡಿರುವ ಧರ್ಮ, ದೇವರು, ಕಲೆ, ಸಂಗೀತ ಮತ್ತು ಸಾಹಿತ್ಯದ ಸಂಗತಿಗಳೆಲ್ಲವೂ ಜನಮನದಲ್ಲಿ ಬೇರೂರುವಂತೆ ಮಾಡಿವೆ.

ಇಂತಹ ನಂಬಿಕೆಗಳಿಂದಾಗಿ ಪ್ರಪಂಚದಲ್ಲಿರುವ ಸಿರಿವಂತರು ಮತ್ತು ಬಡವರು– ಇಬ್ಬರೂ ಮೇಲು ಕೀಳಿನ ಮತ್ತು ಅಸಮಾನತೆಯ ಬದುಕಿಗೆ ಮಾನಸಿಕವಾಗಿ ಒಗ್ಗಿಹೋಗಿದ್ದಾರೆ. ಇದರಿಂದಾಗಿ ಸಿರಿವಂತರ ಮನದಲ್ಲಿ ನಮ್ಮಂತೆಯೇ ಮಾನವರಾಗಿ ಹುಟ್ಟಿ ಬೆಳೆದು ಬಾಳುತ್ತಿರುವ ಜನರ ಬಡತನಕ್ಕೆ ಕಾರಣವೇನು....ಬಡವರ ಸಂಕಟಗಳೇನು... ಬಡತನವನ್ನು ನಿವಾರಿಸುವುದಕ್ಕೆ ನಮ್ಮ ಕೊಡುಗೆಯೇನು...ಈಗ ನಾನು ಹೊಂದಿರುವ ಸಂಪತ್ತು ಯಾವ ರೀತಿಯಲ್ಲಿ ನನಗೆ ದೊರಕಿತು...ನನಗಿರುವ ಸಂಪತ್ತು ಮತ್ತೊಬ್ಬನಿಗೆ ಇಲ್ಲದಿರಲು ಕಾರಣಗಳೇನು ಎಂಬುದನ್ನು ಕುರಿತ ಆಲೋಚನೆಗಳು ಇಲ್ಲವಾಗಿವೆ. ಆಸ್ತಿಯ ಒಡೆತನದ ಹಕ್ಕು ಇರುವುದರಿಂದಲೇ ಸಿರಿವಂತರು ಕರುಣೆಯಿಲ್ಲದವರಾಗಿದ್ದಾರೆ.

ಬಡವರ ಮನದಲ್ಲಿ ನಾವು ಸಂಪತ್ತನ್ನಾಗಲಿ ಇಲ್ಲವೇ ಒಳ್ಳೆಯ ಬದುಕನ್ನಾಗಲಿ ಈ ಪ್ರಪಂಚಕ್ಕೆ ಬರುವಾಗ ದೇವರಿಂದ ಕೇಳಿ ಪಡೆದುಕೊಂಡು ಬರಲಿಲ್ಲ. ಆದ್ದರಿಂದ ಮಯ್ಯಲ್ಲಿ ಶಕ್ತಿಯಿರುವ ತನಕ ದುಡಿಯುತ್ತಿದ್ದು, ಕೊನೆಗೊಮ್ಮೆ ಸಾಯಬೇಕು ಎಂಬ ನಿಲುವನ್ನು ಹೊಂದಿದ್ದಾರೆಯೇ ಹೊರತು, ತಮ್ಮ ಬಡತನಕ್ಕೆ ಜನಾಂಗ ತಾರತಮ್ಯ, ಜಾತಿಮತದ ಕಟ್ಟುಪಾಡುಗಳು, ಆಸ್ತಿಯ ಹಕ್ಕು ಮತ್ತು ಸಿರಿವಂತರು ಮಾಡುತ್ತಿರುವ ಸುಲಿಗೆ ಮತ್ತು ವಂಚನೆಯು ಕಾರಣವೆಂಬ ವಾಸ್ತವವನ್ನು ಅರಿಯದವರಾಗಿದ್ದಾರೆ. ಆಸ್ತಿಯು ಇಲ್ಲದಿರುವುದರಿಂದಲೇ ಬಡವರು ಕಯ್ ಒಡ್ಡಿ ಬೇಡುವ ದೀನರಾಗಿದ್ದಾರೆ;



## ೨. ರೈತನಿಗೆ ತನ್ನ ಹೊಲದ್ದೇ ಚಿಂತೆ

**ಅನುವಾದ: ಶಾ.ಬಾಲುರಾವ್**

ರೈತನಿಗೆ ತನ್ನ ಹೊಲದ್ದೇ ಚಿಂತೆ
ಅವನು ದನಕರುಗಳನ್ನು ಸಾಕುತ್ತಾನೆ ಕಂದಾಯ ಕಟ್ಟುತ್ತಾನೆ
ಕೂಲಿಯ ದುಡ್ಡುಳಿಸಲೆಂದು ಮಕ್ಕಳು ಮಾಡುತ್ತಾನೆ
ಅವನ ಬದುಕು ನಿಂತಿರುವುದು ಹಾಲಿನ ಧಾರಣೆಯ ಮೇಲೆ

ಪಟ್ಟಣದ ಮಂದಿ ರೈತಜನರ ಮಣ್ಣಿನ ಮೋಹದ ಬಗ್ಗೆ
ಅವರ ಯೋಗಕ್ಷೇಮದ ಬಗ್ಗೆ ಮಾತಾಡುತ್ತಾರೆ
ಅವರೇ ದೇಶದ ಅಸ್ತಿಭಾರವೆನ್ನುತ್ತಾರೆ.

ಪಟ್ಟಣದ ಮಂದಿ ರೈತಜನರ ಮಣ್ಣಿನ ಮೋಹದ ಬಗ್ಗೆ
ಅವರ ಯೋಗಕ್ಷೇಮದ ಬಗ್ಗೆ ಮಾತಾಡುತ್ತಾರೆ
ಅವರೇ ದೇಶದ ಅಸ್ತಿಭಾರವೆನ್ನುತ್ತಾರೆ.

ರೈತನಿಗೆ ತನ್ನ ಹೊಲದ್ದೇ ಚಿಂತೆ
ಅವನು ದನಕರುಗಳನ್ನು ಸಾಕುತ್ತಾನೆ ಕಂದಾಯ ಕಟ್ಟುತ್ತಾನೆ
ಕೂಲಿಯ ದುಡ್ಡುಳಿಸಲೆಂದು ಮಕ್ಕಳು ಮಾಡುತ್ತಾನೆ
ಅವನ ಬದುಕು ನಿಂತಿರುವುದು ಹಾಲಿನ ಧಾರಣೆಯ ಮೇಲೆ.

**ಇಡೀ ಜಗತ್ತಿನ ಜನಸಮುದಾಯಕ್ಕೆ ಅನ್ನವನ್ನು ಕೊಡುವ ಬೇಸಾಯಗಾರನ ಬದುಕಿನ ಬವಣೆಗಳನ್ನು ಚಿತ್ರಿಸುತ್ತ, ಆತನು ಬೆಳೆಯುವ ಬೆಳೆಗಳಿಗೆ ತಕ್ಕ ಬೆಲೆಯು ಹಣದ ರೂಪದಲ್ಲಿ ದೊರೆತಾಗ ಮಾತ್ರ, ಅವನ ಬದುಕಿನಲ್ಲಿ ನೆಮ್ಮದಿಯು ಉಂಟಾಗುತ್ತದೆ ಎಂಬ ಸಂಗತಿಯನ್ನು ಈ ಕವನದಲ್ಲಿ ಹೇಳಲಾಗಿದೆ.**

ರೈತ=ಬೇಸಾಯಗಾರ/ಹೊಲಗದ್ದೆ ತೋಟದಲ್ಲಿ ದವಸಧಾನ್ಯಗಳನ್ನು ಬೆಳೆಯುವ ವ್ಯಕ್ತಿ; ಹೊಲ=ಬೆಳೆಯನ್ನು ತೆಗೆಯುವುದಕ್ಕೆ ನೆಲೆಯಾದ ಭೂಮಿ;

**ರೈತನಿಗೆ ತನ್ನ ಹೊಲದ್ದೇ ಚಿಂತೆ**=ತನ್ನ ಮತ್ತು ತನ್ನ ಕುಟುಂಬದ ಬದುಕಿಗೆ ನೆಲೆಯಾದ ಬೆಳೆ ಕೊಡುವ ಹೊಲದ ಬಗ್ಗೆ ಸದಾಕಾಲ ಬೇಸಾಯಗಾರ ಚಿಂತಿಸುತ್ತಿರುತ್ತಾನೆ. ಏಕೆಂದರೆ ಬೀಸುವ ಗಾಳಿ, ಉರಿಯುವ ಸೂರ್ಯ, ಸುರಿಯುವ ಮಳೆ ಮುಂತಾದ ನಿಸರ್ಗದ ಆಗುಹೋಗುಗಳೆಲ್ಲವೂ ಬೇಸಾಯ ಮಾಡುವಾಗ ಸಕಾಲದಲ್ಲಿ ಬಂದರೆ ನೆರವಾಗುತ್ತವೆ. ಬಾರದಿದ್ದರೆ... ಬೇಸಾಯಗಾರನ ಬದುಕನ್ನೇ ಸಾಲ ಸೋಲ, ಹಸಿವು, ಬಡತನ, ಸಾವು ನೋವಿಗೆ ದೂಡುತ್ತವೆ. ಬೆಳೆಯುವ ಬೆಳೆಯಾಗಲಿ ಇಲ್ಲವೇ ಮಾರಾಟದಿಂದ ದೊರೆಯುವ ಬೆಲೆಯಾಗಲಿ ಆತನ ಕಯ್ಯಲ್ಲಿಲ್ಲ. ಒಂದು ನಿಸರ್ಗವನ್ನು ಅವಲಂಬಿಸಿದ್ದರೆ, ಮತ್ತೊಂದು ಮಾರುಕಟ್ಟೆಯನ್ನು ಅವಲಂಬಿಸಿದೆ.

ಕಂದಾಯ=ರಾಜನಿಗೆ ಇಲ್ಲವೇ ಆಡಳಿತವನ್ನು ನಡೆಸುತ್ತಿರುವ ಸರ್ಕಾರಕ್ಕೆ ಜಮೀನಿನ ಒಡೆಯನಾದ ಬೇಸಾಯಗಾರನು ವರುಶಕ್ಕೊಮ್ಮೆ ಕಟ್ಟುವ ತೆರಿಗೆಯ ರೂಪದ ಹಣ; ಕೂಲಿ=ಜಮೀನಿನ ಒಡೆಯನಾದ ಬೇಸಾಯಗಾರನ ಜತೆಜತೆ ಯಲ್ಲಿಯೇ ಪರಿಶ್ರಮದಿಂದ ದುಡಿದು, ಅದಕ್ಕೆ ಪ್ರತಿಯಾಗಿ ಹಣವನ್ನು ಇಲ್ಲವೇ ದವಸವನ್ನು ಪಡೆಯುವ ವ್ಯಕ್ತಿ;

ದುಡ್ಡು+ಉಳಿಸಲು+ಎಂದು; ದುಡ್ಡುಳಿಸಲೆಂದು=ಕೂಲಿಗೆ ಕೊಡುವ ಹಣವನ್ನು ಉಳಿಸುವುದಕ್ಕಾಗಿ;

**ಕೂಲಿಯ ದುಡ್ಡುಳಿಸಲೆಂದು ಮಕ್ಕಳು ಮಾಡುತ್ತಾನೆ**=ಈ ನುಡಿಗಳು ಒಂದು ರೂಪಕದ ತಿರುಳಿನಲ್ಲಿ ಬಳಕೆಯಾಗಿವೆ. ಕೂಲಿಯಾಳಿಗೆ ಹಣವನ್ನು ಕೊಡಲಾಗ ದಂತಹ ಬಡತನದಲ್ಲಿರುವ ಬೇಸಾಯಗಾರನು ಹೆಚ್ಚು ಹೆಚ್ಚು ಮಕ್ಕಳನ್ನು ಪಡೆಯಲು ಇಚ್ಚೆಪಡುತ್ತಾನೆ. ತನ್ನ ಮನೆಯಲ್ಲಿಯೇ ದುಡಿಯುವ ವ್ಯಕ್ತಿಗಳು ಹೆಚ್ಚಾದರೆ, ಕೂಲಿಗೆ ಕೊಡಬೇಕಾದ ಹಣ ಉಳಿಯುತ್ತದೆ ಎಂಬ ಉದ್ದೇಶ;

**ಅವನ ಬದುಕು ನಿಂತಿರುವುದು**=ಬೇಸಾಯಗಾರನ ಬದುಕಿನ ನೋವು ನಲಿವುಗಳೆಲ್ಲವೂ ಅವಲಂಬಿಸಿರುವುದು; ಧಾರಣೆ=ಬೆಲೆ/ದರ: **ಹಾಲಿನ ಧಾರಣೆ**= ಇದೊಂದು ನುಡಿಗಟ್ಟು. ಬೇಸಾಯಗಾರ ಬೆಳೆಯುವ ದವಸಧಾನ್ಯಗಳು, ಕುರಿ ಸಾಕಾಣಿಕೆ, ಪಶುಪಾಲನೆ ಮತ್ತು ರೇಶ್ಮೆಹುಳು ಸಾಕಾಣಿಕೆ ಮುಂತಾದ ಎಲ್ಲ ಬಗೆಯ ವಸ್ತುಗಳ ಉತ್ಪಾದನೆಗೂ ಹಣದ ರೂಪದಲ್ಲಿ ದೊರೆಯುವ ಬೆಲೆ;

**ಅವನ ಬದುಕು ನಿಂತಿರುವುದು ಹಾಲಿನ ಧಾರಣೆಯ ಮೇಲೆ**= ಬೇಸಾಯಗಾರನು ಹಗಲು ಇರುಳೆನ್ನದೆ ತನ್ನ ಬೆವರನ್ನು ಹರಿಸಿ, ರಕ್ತವನ್ನು ಬಸಿದು ಮಾಡಿದ ದುಡಿಮೆಯಿಂದ ಉತ್ಪಾದಿಸಿದ ವಸ್ತುಗಳಿಗೆ ಮಾರುಕಟ್ಟೆಯಲ್ಲಿ ತಕ್ಕ ಬೆಲೆ ದೊರೆತರೆ ಬೇಸಾಯಗಾರನು ತನ್ನ ಕುಟುಂಬದೊಡನೆ ಮತ್ತು ನೆರೆಹೊರೆಯವ ರೊಡನೆ ನೆಮ್ಮದಿಯಿಂದ ಬಾಳುತ್ತಾನೆ. ತಕ್ಕ ಬೆಲೆ ದೊರೆಯದಿದ್ದರೆ ಬದುಕಿನುದ್ದಕ್ಕೂ ಜೀವಂತವಾಗಿ ನರಳುತ್ತಾನೆ ಇಲ್ಲವೇ ಸಾಲಸೋಲದ ಸನ್ನಿವೇಶಗಳನ್ನು ಎದುರಿಸಲಾಗದೆ ಸಾವಿನ ಕುಣಿಕೆಗೆ ತನ್ನ ಕೊರಳನ್ನು ಒಡ್ಡುತ್ತಾನೆ;

ಪಟ್ಟಣದ ಮಂದಿ=ದೊಡ್ಡ ದೊಡ್ಡ ನಗರಗಳಲ್ಲಿ ವಾಸಮಾಡುತ್ತಿರುವ ಜನರು/ ನಾಡಿನ ಸಂಪತ್ತಿನಲ್ಲಿ ಬಹು ದೊಡ್ಡ ಪಾಲನ್ನು ಪಡೆಯುತ್ತಿರುವವರು/ಉನ್ನತವಾದ ಗದ್ದುಗೆಯಲ್ಲಿ ಕುಳಿತು ನಾಡನ್ನು ಮುನ್ನಡೆಸುವ ಜವಾಬ್ದಾರಿಯನ್ನು ಹೊತ್ತು ಆಡಳಿತ ಸೂತ್ರವನ್ನು ಹಿಡಿದಿರುವವರು;

ಮೋಹ=ಅಕ್ಕರೆ/ಪ್ರೀತಿ; ಯೋಗಕ್ಷೇಮ=ನೆಮ್ಮದಿ/ಜೀವನಕ್ಕೆ ಅಗತ್ಯವಾದು ದೆಲ್ಲವನ್ನೂ ಪಡೆದು ಆನಂದದಿಂದ ಬಾಳುವುದು; ದೇಶ=ನಾಡು/ರಾಜ್ಯ; ಅಸ್ತಿಭಾರ+ಎನ್ನುತ್ತಾರೆ; ಅಸ್ತಿಭಾರ=ಅಡಿಪಾಯ/ತಳಹದಿ;

**ಪಟ್ಟಣದ ಮಂದಿ ರೈತಜನರ ಮಣ್ಣಿನ ಮೋಹದ ಬಗ್ಗೆ ಅವರ ಯೋಗಕ್ಷೇಮದ ಬಗ್ಗೆ ಮಾತಾಡುತ್ತಾರೆ ಅವರೇ ದೇಶದ ಅಸ್ತಿಭಾರವೆನ್ನುತ್ತಾರೆ**= ಬೇಸಾಯಗಾರನು ಬೆಳೆದ ಬೆಳೆಗಳಿಂದಲೇ ಜೀವನಕ್ಕೆ ಅತ್ಯಗತ್ಯವಾದ ಅನ್ನ ಆಹಾರವನ್ನು ಪಡೆಯು ತ್ತಿರುವ ಪಟ್ಟಣದ ಜನರು/ಸಿರಿವಂತರು/ಆಡಳಿತಗಾರರು ಬೇಸಾಯಗಾರನ ಬದುಕನ್ನು ಕುರಿತು ಮಾತಿನಲ್ಲಿ ಹಾಡಿ ಹೊಗಳುತ್ತಾರೆ. ಹಚ್ಚಹಸಿರಿನ ಪಯಿರುಪಚ್ಚೆಗಳ ನಡುವೆ ಮಣ್ಣಿನ ಮಗನಾಗಿ ಬಾಳುವ ಅವನಿಗೆ ಜೀವನದಲ್ಲಿ ಒಳಿತಾಗಲೆಂದು ಬರಿಮಾತುಗಳನ್ನಾಡುತ್ತಾರೆ. ಬೇಸಾಯಗಾರನು ಇಲ್ಲದಿದ್ದರೆ, ಈ ನಾಡು ಇರುತ್ತಿರಲಿಲ್ಲವೆಂದು, ಈ ನಾಡು ಉಳಿದು ಬೆಳೆದು ಬಾಳುತ್ತಿರುವುದಕ್ಕೆ ಬೇಸಾಯಗಾರನ ದುಡಿಮೆಯೇ ಕಾರಣವೆಂದು ಮಾತಿನಲ್ಲಿ ಬಣ್ಣಿಸುತ್ತಾರೆ;

ಆದರೆ ಇಂತಹ ಯಾವುದೇ ಬಣ್ಣದ ಮಾತುಗಳಿಂದ ಬೇಸಾಯಗಾರನ ಬದುಕು ಹಸನಾಗುವುದಿಲ್ಲ. ಅವನ ಬದುಕಿನಲ್ಲಿ ಆನಂದ ಮತ್ತು ನೆಮ್ಮದಿಯು ದೊರೆಯುವಂತಾಗಲು ಇರುವುದು ಒಂದೇ ಒಂದು ದಾರಿ. ಅದೆಂದರೆ ಅವನು ಬೆಳೆದ ಬೆಳೆಗಳಿಗೆ ತಕ್ಕ ಬೆಲೆ ದೊರೆಯುವಂತಹ ಮಾರುಕಟ್ಟೆಯ ಆರ್ಥಿಕ ವ್ಯವಸ್ಥೆಯು ಕಾರ್ಯರೂಪಕ್ಕೆ ಬರಬೇಕು ಎಂಬ ಆಶಯವನ್ನು ಈ ಕವನ ಸೂಚಿಸುತ್ತದೆ.

ಈ ಕವನದಲ್ಲಿ ಪ್ರಸ್ತಾಪಿಸಿರುವ ಸಂಗತಿಗೆ ಪೂರಕವಾಗಿ ಇಂಡಿಯಾ ದೇಶದಲ್ಲಿ ಹಸಿರು ಕ್ರಾಂತಿಯ ಹರಿಕಾರರೆಂದು ಕೀರ್ತಿಯನ್ನು ಪಡೆದಿದ್ದ ಡಾ.ಎಂ.ಎಸ್. ಸ್ವಾಮಿನಾಥನ್ (೧೯೨೫–೨೦೨೩) ಅವರು ಬೇಸಾಯಗಾರನ ಬೆಳೆಗಳಿಗೆ ತಕ್ಕ ಬೆಲೆಯು ದೊರೆಯುವಂತಹ ವ್ಯವಸ್ಥೆಯ ಬಗ್ಗೆ ಹೇಳಿರುವ ನುಡಿಗಳನ್ನು ತಿಳಿದುಕೊಳ್ಳಬೇಕು.

**“ಭಾರತೀಯ ಕೃಷಿ, ಹೈನುಗಾರಿಕೆ, ತೋಟಗಾರಿಕೆ, ಆಹಾರ ಶೇಖರಣೆ ಪ್ರೊಸೆಸಿಂಗ್–ಈ ಎಲ್ಲ ಕ್ಷೇತ್ರಗಳು ಒಂದಕ್ಕೊಂದು ಪೂರಕವಾದವು. ಅದನ್ನು ಅರ್ಥಮಾಡಿಕೊಂಡು ಒಂದು ಸಮಗ್ರ ರಾಷ್ಟ್ರೀಯ ನೀತಿ ಜಾರಿಗೆ ಬರಬೇಕು. ಇದುವರೆಗೆ ಭಾರತದಲ್ಲಿ ಕೃಷಿ ಉತ್ಪನ್ನಗಳ ಬೆಲೆ ನಿಗದಿ ಕುರಿತು ಒಂದು ಸದೃಢವಾದ ವೈಜ್ಞಾನಿಕ ನೀತಿ–ನಿಯಮ ಜಾರಿಗೆ ಬಂದಿಲ್ಲ. ನಾವು ಖರೀದಿಸುವ ಒಂದು ಪೆನ್, ಮೊಬೈಲ್ ಫೋನ್ ಅಥವಾ ಟೆಲಿವಿಶನ್ ಗೆ ದರ ನಿಗದಿ ಮಾಡುವ ವೇಳೆ ಅದರ ಉತ್ಪಾದನಾ ವೆಚ್ಚ, ಮಾರ್ಕೆಟಿಂಗ್ ಗೆ ಆದ ಖರ್ಚನ್ನು ಸೇರಿಸಿ, ಅದರ ಮೇಲೆ ಲಾಭವನ್ನು ಇಟ್ಟುಕೊಂಡು ದರ ನಿಗದಿ ಮಾಡಲಾಗುತ್ತದೆ.**

**ಅದೇ ಭಾರತದ ರೈತ ಒಂದು ಕ್ವಿಂಟಾಲ್ ಅಕ್ಕಿ ಅಥವಾ ಗೋಧಿ ಬೆಳೆಯಲು ಆಗುವ ಒಟ್ಟಾರೆ ವೆಚ್ಚ ಎಷ್ಟು...ಅದಕ್ಕಾಗಿ ಆ ರೈತನ ಕುಟುಂಬ ಹರಿಸಿದ ಬೆವರಿನ ಬೆಲೆ ಎಷ್ಟು...ಅದನ್ನು ಮಾರುಕಟ್ಟೆಗೆ ತಲುಪಿಸಲು ಬೇಕಾಗುವ ವೆಚ್ಚ ಎಷ್ಟು... ಇವೆಲ್ಲವನ್ನೂ ಕೂಡಿಸಿ, ಅದರ ಮೇಲೆ ಶೇಕಡಾ ಮೂವತ್ತರಷ್ಟು ಲಾಭ ಸೇರಿಸಿ ಬೆಲೆ ನಿಗದಿಯಾಗುತ್ತಿದೆಯೇ. ಈವತ್ತು ಮೊದಲು ಆಗಬೇಕಾಗಿರುವುದು ಇದು. ಮಾರುಕಟ್ಟೆಯಲ್ಲಿ ರೈತ ಬೆಳೆದ ಬೆಲೆಗೆ ಸೂಕ್ತ ಬೆಲೆ ನೀಡಿದಲ್ಲಿ, ರೈತರು ಸರ್ಕಾರದ ಸಬ್ಸಿಡಿಗಳಿಗೆ ತಲೆ ಕೆಡಿಸಿಕೊಳ್ಳುವುದಿಲ್ಲ.”**



# ೩. ಒಂದು ರಾತ್ರಿಯ ತಾಣ

**ಅನುವಾದ: ಶಾ.ಬಾಲುರಾವ್**

ನ್ಯೂಯಾರ್ಕಿನಲ್ಲಿ ಬ್ರಾಡ್ ವೇ ಮತ್ತು ಇಪ್ಪತ್ತಾರನೆ ರಸ್ತೆಗಳು ಕೂಡುವ ಮೂಲೆ
ಒಬ್ಬ ಮನುಷ್ಯ ಚಳಿಗಾಲದಲ್ಲಿ ಪ್ರತಿದಿನ ಸಂಜೆ ಅಲ್ಲಿ ನಿಂತು
ಹೋಗಿ ಬರುವವರನ್ನು ಮನೆಮಠವಿಲ್ಲದವರಿಗೆ
ಒಂದು ರಾತ್ರಿಯ ತಾಣದ ವ್ಯವಸ್ಥೆಗೆ ಸಹಾಯ ಮಾಡಿ
ಎಂದು ಬೇಡುತ್ತಾನೆಂದು ಕೇಳಿದ್ದೇನೆ

ಅದರಿಂದ ಜಗತ್ತು ಬದಲಾಗುವುದಿಲ್ಲ
ಮನುಷ್ಯ-ಮನುಷ್ಯರ ನಡುವಿನ ಸಂಬಂಧ ಸುಧಾರಿಸುವುದಿಲ್ಲ
ಸುಲಿಗೆಯ ಯುಗ ಕೊನೆಗೊಳ್ಳುವುದಿಲ್ಲ
ಆದರೆ ಕೆಲವರಿಗೆ ರಾತ್ರಿಯ ತಾಣ ದೊರೆಯುತ್ತದೆ
ಅವರಿಂದ ಒಂದು ರಾತ್ರಿಯ ಕಾಲ ಚಳಿಗಾಳಿ ದೂರವುಳಿಯುತ್ತದೆ
ಅವರ ಪಾಲಿನ ಹಿಮ ರಸ್ತೆಗೆ ಬೀಳುತ್ತದೆ

ಅಯ್ಯಾ, ಓದುಗ ಮಹಾಶಯ, ಇದನ್ನೋದಿ ಈ ಪುಸ್ತಕವನ್ನು ಕೆಳಗಿಡಬೇಡ

ಕೆಲವರಿಗೆ ರಾತ್ರಿಯ ತಾಣ ದೊರೆಯುತ್ತದೆ
ಅವರಿಂದ ಒಂದು ರಾತ್ರಿಯ ಕಾಲ ಚಳಿಗಾಳಿ ದೂರವುಳಿಯುತ್ತದೆ
ಅವರ ಪಾಲಿನ ಹಿಮ ರಸ್ತೆಗೆ ಬೀಳುತ್ತದೆ
ಆದರೆ ಅದರಿಂದ ಜಗತ್ತು ಬದಲಾಗುವುದಿಲ್ಲ
ಮನುಷ್ಯ-ಮನುಷ್ಯರ ನಡುವಿನ ಸಂಬಂಧ ಸುಧಾರಿಸುವುದಿಲ್ಲ
ಸುಲಿಗೆಯ ಯುಗ ಕೊನೆಗೊಳ್ಳುವುದಿಲ್ಲ.

**ಬಡತನದಿಂದಾಗಿ ಬೀದಿಪಾಲಾಗಿರುವ ಜನರಿಗೆ ಅನುಕೂಲವಂತರಾಗಿರುವ ಜನರು ತಮ್ಮ ಕಯ್ಯಿಂದಾಗುವ ನೆರವನ್ನು ನೀಡುವಂತಾಗಬೇಕು ಎಂಬ ಸಂಗತಿಯನ್ನು ಈ ಕವನದಲ್ಲಿ ಹೇಳಲಾಗಿದೆ.**

ಬಡತನ=ಉಣಲು ಸಾಕಷ್ಟು ಆಹಾರವಿಲ್ಲದೆ, ತೊಡಲು ಸರಿಯಾಗಿ ಬಟ್ಟೆಯಿಲ್ಲದೆ, ವಾಸಿಸಲು ಮನೆಯಿಲ್ಲದೆ ಹಸಿವು ಮತ್ತು ಅಪಮಾನದ ಸಂಕಟದಿಂದ ಕೂಡಿರುವ ಬದುಕು;

ಅನುಕೂಲವಂತರು=ಚೆನ್ನಾಗಿ ಉಣಲು ಉಡಲು ವಾಸಿಸಲು ಅಗತ್ಯವಾದ ಆಸ್ತಿ, ಒಡವೆ, ವಸ್ತುಗಳನ್ನುಳ್ಳವರು;

ನ್ಯೂಯಾರ್ಕ್=ಉತ್ತರ ಅಮೆರಿಕ ದೇಶದಲ್ಲಿರುವ ಒಂದು ದೊಡ್ಡ ನಗರ; ಬ್ರಾಡ್ ವೇ=ನ್ಯೂಯಾರ್ಕ್ ನಗರದಲ್ಲಿರುವ ಒಂದು ರಸ್ತೆಯ ಹೆಸರು; ಇಪ್ಪತ್ತಾರನೆಯ ರಸ್ತೆ=ದೊಡ್ಡ ರಸ್ತೆಯೊಡನೆ ಕೂಡುವ ಮತ್ತೊಂದು ರಸ್ತೆ; ಕೂಡು= ಸೇರು; ಮೂಲೆ=ಅಂಚು/ಕೊನೆ; ಮನೆಮಠ+ಇಲ್ಲದವರಿಗೆ; ಮನೆಮಠ= ಇದೊಂದು ಜೋಡುನುಡಿ. ವಾಸದ ನೆಲೆ/ಬೀಡು; ತಾಣ=ನೆಲೆ/ಆಶ್ರಯದ ಜಾಗ; ವ್ಯವಸ್ಥೆ=ಏರ್ಪಾಡು/ಸಿದ್ಧತೆ/ತಯಾರು; **ಒಂದು ರಾತ್ರಿಯ ತಾಣದ ವ್ಯವಸ್ಥೆ=** ಒಂದು ರಾತ್ರಿಯ ಕಾಲ ತಂಗಲು ನೆಲೆಯನ್ನು ಕಲ್ಪಿಸಿಕೊಡುವುದು;

ಸಹಾಯ=ನೆರವು; ಬೇಡು=ಕೇಳು/ಯಾಚಿಸು; ಕೇಳಿದ್ದೇನೆ=ಬೇರೆಯವರಿಂದ ಒಂದು ಸಂಗತಿಯನ್ನು ಕೇಳಿ ತಿಳಿಯುವುದು; ಅದರಿಂದ=ಈ ರೀತಿ ನೆರವು ನೀಡುವ ಕ್ರಿಯೆಯಿಂದ; ಜಗತ್ತು=ಪ್ರಪಂಚ/ಲೋಕ; ಬದಲಾಗು=ವ್ಯತ್ಯಾಸಗೊಳ್ಳು/ ಪರಿವರ್ತನೆಗೊಳ್ಳು; **ಅದರಿಂದ ಜಗತ್ತು ಬದಲಾಗುವುದಿಲ್ಲ=** ಬೀದಿಪಾಲಾಗಿರುವ ಬಡವರಿಗೆ ಒಂದು ರಾತ್ರಿ ತಣ್ಣನೆಯ ಚಳಿಗಾಳಿಯಿಂದ ಪಾರಾಗಿ ನೆಮ್ಮದಿಯಿಂದ ಮಲಗಲು ಆಶ್ರಯವನ್ನು ಕಲ್ಪಿಸಿದ ಮಾತ್ರಕ್ಕೆ ಬಡವರ ಸಂಕಟಗಳೆಲ್ಲವೂ ನಿವಾರಣೆಗೊಂಡು ಬಡತನವೇ ಜಗತ್ತಿನಿಂದ ತೊಲಗುವುದಿಲ್ಲ;

ಸಂಬಂಧ=ನಂಟು; ಸುಧಾರಿಸು=ಉತ್ತಮಗೊಳ್ಳು/ಚೇತರಿಸು;

**ಮನುಷ್ಯ-ಮನುಷ್ಯರ ನಡುವಿನ ಸಂಬಂಧ ಸುಧಾರಿಸುವುದಿಲ್ಲ** = ಜಗತ್ತಿನಲ್ಲಿರುವ ಜನರ ನಡುವೆ ಪರಸ್ಪರ ಒಲವು ನಲಿವಿನ ನಂಟು ಉತ್ತಮಗೊಳ್ಳುವುದಿಲ್ಲ;

ಸುಲಿಗೆ=ದೋಚುವಿಕೆ/ಲೂಟಿ/ಕೊಳ್ಳೆ; ಯುಗ=ಕಾಲ; ಕೊನೆ=ಅಂತ್ಯ; **ಸುಲಿಗೆಯ ಯುಗ ಕೊನೆಗೊಳ್ಳುವುದಿಲ್ಲ=** ದುಡಿಯುವ ಶ್ರಮಜೀವಿಗಳಿಂದ

ಉತ್ಪನ್ನಗೊಂಡ ಸಂಪತ್ತಿನ ಲೂಟಿಯು ಎಲ್ಲ ಕಾಲದಲ್ಲಿಯೂ ನಿಲ್ಲದೆ ಮುಂದುವರೆಯುತ್ತಲೇ ಇರುತ್ತದೆ;

**ಆದರೆ ಕೆಲವರಿಗೆ ರಾತ್ರಿಯ ತಾಣ ದೊರೆಯುತ್ತದೆ**=ಆದರೆ ಕೆಲವರಿಗಾದರೂ ರಾತ್ರಿಯ ಕಾಲದಲ್ಲಿ ಮಲಗಿ ನಿದ್ರಿಸಲು ಒಂದು ನೆಲೆ ಸಿಗುತ್ತದೆ; ದೂರ+ ಉಳಿಯುತ್ತದೆ; **ಅವರಿಂದ ಒಂದು ರಾತ್ರಿಯ ಕಾಲ ಚಳಿಗಾಳಿ ದೂರವುಳಿಯುತ್ತದೆ**= ಒಂದು ರಾತ್ರಿಯ ಕಾಲ ಅವರು ಚಳಿಗಾಳಿಯಿಂದ ನಡುಗಿ ನರಳುವುದು ತಪ್ಪುತ್ತದೆ; ಹಿಮ=ಮಂಜಿನ ಹನಿ/ಮಂಜಿನ ಗೆಡ್ಡೆ;

**ಅವರ ಪಾಲಿನ ಹಿಮ ರಸ್ತೆಗೆ ಬೀಳುತ್ತದೆ**=ಅವರ ಮಯ್ ಮೇಲೆ ಬೀಳಬೇಕಾಗಿದ್ದ ಹಿಮದ ರಾಶಿಯು ರಸ್ತೆಯಲ್ಲಿ ಬೀಳುತ್ತದೆ.

ಅಯ್ಯಾ=ಗಂಡಸರನ್ನು ಕುರಿತು ಮಾತನಾಡಿಸುವಾಗ ಬಳಸುವ ಪದ; ಮಹಾಶಯ=ದೊಡ್ಡ ವ್ಯಕ್ತಿ; ಇದನ್ನು+ಓದಿ; ಕೆಳಗೆ+ಇಡಬೇಡ;

**ಅಯ್ಯಾ, ಓದುಗ ಮಹಾಶಯ, ಇದನ್ನೋದಿ ಈ ಪುಸ್ತಕವನ್ನು ಕೆಳಗಿಡಬೇಡ**= ಬಡತನದಿಂದ ಬೀದಿಪಾಲಾದವರಿಗೆ ರಾತ್ರಿಯ ವೇಳೆ ತಂಗಲು ಅಗತ್ಯವಾದ ಆಶ್ರಯದ ನೆಲೆಯನ್ನು ಒದಗಿಸಲು ಒಬ್ಬ ರಸ್ತೆಯಲ್ಲಿ ನಿಂತು ಬಡವರ ಪರವಾಗಿ ಮೊರೆಯಿಡುತ್ತಿದ್ದಾನೆ ಎಂಬ ಸುದ್ದಿಯನ್ನು ಓದಿದ ನಂತರ ಅಯ್ಯಾ ಓದುಗ ಮಹಾಶಯ, ಮನದಲ್ಲಿ ಇಲ್ಲವೇ ಮಾತಿನಲ್ಲಿ ಕೇವಲ ಅನುಕಂಪವನ್ನು ತೋರಿಸಿ ಸುಮ್ಮನಾಗಬೇಡ. ಪರರಿಗೆ ನೆರವನ್ನು ನೀಡುವಷ್ಟು ಸಂಪತ್ತು ನಿನ್ನಲ್ಲಿದ್ದರೆ, ಅದರಲ್ಲಿ ಸ್ವಲ್ಪವನ್ನಾದರೂ ಇಂತಹ ಕಾರ್ಯವನ್ನು ಮಾಡಲು ನೀಡು. ಅಂದರೆ ಬಡವರ ಸಂಕಟವನ್ನು ಪರಿಹರಿಸುವಂತಹ ಕೆಲಸವನ್ನು ಮಾಡು ಇಲ್ಲವೇ ಅಂತಹ ಕೆಲಸದಲ್ಲಿ ತೊಡಗಿದವರಿಗೆ ಒತ್ತಾಸೆಯಾಗಿ ನಿಲ್ಲು;

**“ಆದರೆ ಅದರಿಂದ ಜಗತ್ತು ಬದಲಾಗುವುದಿಲ್ಲ.ಮನುಷ್ಯ-ಮನುಷ್ಯರ ನಡುವಿನ ಸಂಬಂಧ ಸುಧಾರಿಸುವುದಿಲ್ಲ ಸುಲಿಗೆಯ ಯುಗ ಕೊನೆಗೊಳ್ಳುವುದಿಲ್ಲ”** ಎಂಬ ನುಡಿಗಳು ಮಾನವ ಸಮುದಾಯದ ಚರಿತ್ರೆಯನ್ನೇ ಹೇಳುತ್ತಿವೆ.

ಜಗತ್ತಿನಲ್ಲಿ ಬಡತನದಿಂದ ನರಳುತ್ತಿರುವ ವ್ಯಕ್ತಿಗಳಿಗೆ ನೀಡುವ ಯಾವುದೇ ಬಗೆಯ ನೆರವು ಕೇವಲ ತತ್ಕಾಲದ ಸಂಕಟಕ್ಕೆ ಒಂದು ಪರಿಹಾರವೇ ಹೊರತು, ಶಾಶ್ವತವಾಗಿ ಮಾನವ ಸಮುದಾಯದಲ್ಲಿ ಬಡತನವನ್ನೇ ಇಲ್ಲದಂತೆ ಮಾಡುವುದಿಲ್ಲ.

ಜಗತ್ತಿನ ಉದ್ದಗಲದಲ್ಲಿರುವ ಎಲ್ಲ ದೇಶಗಳಲ್ಲಿಯೂ ದುಡಿಯುವ ಶ್ರಮ ಜೀವಿಗಳೇ ಬಡತನದಿಂದ ನರಳುತ್ತಿದ್ದಾರೆ. ಇದಕ್ಕೆ ಕಾರಣವೇನೆಂದರೆ ಸಾಮಾಜಿಕ ರಚನೆ ಮತ್ತು ಸಂಪತ್ತಿನ ವಿತರಣೆಯಲ್ಲಿರುವ ವಂಚನೆ ಮತ್ತು ಕ್ರೂರತನ.

ಸಾಮಾಜಿಕ ರಚನೆಯು ಜಗತ್ತಿನ ಜನಸಮುದಾಯವನ್ನು ಕಪ್ಪು–ಬಿಳುಪು ಎಂಬ ಮಯ್ ಬಣ್ಣದಿಂದ; ಹತ್ತಾರು ಬಗೆಯ ಧರ್ಮಗಳ ಒಕ್ಕೂಟಗಳಿಂದ; ನೂರೆಂಟು ಬಗೆಯ ಜಾತಿಗಳಿಂದ ಬಹುಬಗೆಯ ಗುಂಪುಗಳನ್ನಾಗಿ ವಿಂಗಡಿಸಿದೆ. ಪ್ರತಿಯೊಂದು ಗುಂಪಿನವರು ತಮ್ಮ ಜಾತಿ/ಧರ್ಮ/ಜನಾಂಗದವರ ಹಿತಾಸಕ್ತಿಗಾಗಿ ಹೋರಾಡುತ್ತ, ಇನ್ನುಳಿದ ಗುಂಪಿನವರ ಬಗ್ಗೆ ಅಸಹನೆ, ಅಸೂಯೆ, ಆಕ್ರೋಶ ಮತ್ತು ಹಗೆತನವನ್ನು ಹೊಂದಿದ್ದಾರೆ. ಇದರಿಂದಾಗಿ ಮಾನವ–ಮಾನವರ ನಡುವಣ ನಂಟು ಎಂದೆಂದಿಗೂ ಒಲವು ನಲಿವು ನೆಮ್ಮದಿಯಿಂದ ಕೂಡಿರುವುದಿಲ್ಲ;

ಸಂಪತ್ತಿನ ವಿತರಣೆಯಲ್ಲಿ ನಿಸರ್ಗದ ಸಂಪತ್ತಿನ ಮೂಲವಾದ ಭೂಮಿಯ ಮೇಲೆ ಒಡೆತನದ ಹಕ್ಕನ್ನು ಹೊಂದಲು ಮಾನವರಿಗೆ ಅವಕಾಶ ನೀಡಿದೆ. ಇದರಿಂದಾಗಿ ಬಿಳಿಯರು ಮತ್ತು ಜಾತಿ ಧರ್ಮಗಳಲ್ಲಿ ಮೇಲಿನ ಹಂತದಲ್ಲಿರುವವರು ಶತಶತಮಾನಗಳಿಂದ ಜಾತಿಬಲ/ತೋಳ್ಬಲ/ಹಣಬಲದಿಂದ ಹೆಚ್ಚು ಹೆಚ್ಚು ಭೂಮಿಯನ್ನು ತಮ್ಮದನ್ನಾಗಿ ಮಾಡಿಕೊಂಡು ಒಡೆಯರಾಗಿ ಮೆರೆಯುತ್ತ, ಆಡಳಿತದ ಗದ್ದುಗೆಯಲ್ಲಿ ಕುಳಿತು ಜನರನ್ನು ತಮ್ಮ ಹತೋಟಿಯಲ್ಲಿಟ್ಟುಕೊಂಡು, ಕೋಟಿಗಟ್ಟಲೆ ಬಡವರ ದುಡಿಮೆಯ ಶ್ರಮದಿಂದ ಉತ್ಪನ್ನಗೊಂಡ ಸಂಪತ್ತನ್ನು ಲೂಟಿಮಾಡುತ್ತ, ಜಗತ್ತಿನ ದವಸಧಾನ್ಯ, ಒಡವೆವಸ್ತು ಮತ್ತು ಆಸ್ತಿಯಲ್ಲಿ ಬಹುದೊಡ್ಡ ಪಾಲನ್ನು ತಮ್ಮ ವಶದಲ್ಲಿಟ್ಟುಕೊಂಡಿದ್ದಾರೆ. ಆಸ್ತಿಯ ಒಡೆತನದ ಹಕ್ಕು ಇರುವ ತನಕ ಮಾನವರ ನಡುವೆ ಪರಸ್ಪರ ಒಲವು ನಲಿವು ನೆಮ್ಮದಿಯ ನಂಟು ಬೆಳೆಯುವುದಿಲ್ಲ ಮತ್ತು ಇತರರ ಸಂಪತ್ತನ್ನು ಲೂಟಿಮಾಡುವುದು ನಿಲ್ಲುವುದಿಲ್ಲ ಎನ್ನುವುದು ವಾಸ್ತವ ಸಂಗತಿಯಾಗಿದೆ.

ಜಗತ್ತಿನ ಮಾನವ ಸಮುದಾಯದಲ್ಲಿರುವ ಬಡತನ ತೊಲಗಿ, ಪ್ರತಿಯೊಬ್ಬ ವ್ಯಕ್ತಿಗೂ ಅನ್ನ, ಬಟ್ಟೆ, ವಸತಿ, ವಿದ್ಯೆ, ಉದ್ಯೋಗ ಮತ್ತು ಆರೋಗ್ಯ ದೊರೆಯುವಂತಾಗಬೇಕಾದರೆ ಆಸ್ತಿಯ ಹಕ್ಕು ರದ್ದಾಗಬೇಕು ಮತ್ತು ನಿಸರ್ಗದ ಸಂಪತ್ತು ಹಾಗೂ ದುಡಿಮೆಯ ಸಂಪತ್ತಿನ ಪಾಲು ಎಲ್ಲರಿಗೂ ಸಮಾನವಾಗಿ ದೊರೆಯುವಂತಹ ವ್ಯವಸ್ಥೆಯು ಬರಬೇಕು ಎಂಬ ಆಶಯವನ್ನು ಈ ಕವನ ಸೂಚಿಸುತ್ತಿದೆ. ❖

# ೪. ಓದು ಬಲ್ಲ ದುಡಿಮೆಗಾರನೊಬ್ಬನ ಪ್ರಶ್ನೆಗಳು

**ಅನುವಾದ : ಶಾ.ಬಾಲುರಾವ್**

ಸಪ್ತದ್ವಾರಗಳ ಥೀಬ್ಸ್ ನಗರವನ್ನು ಯಾರು ಕಟ್ಟಿದರು
ಪುಸ್ತಕಗಳು ರಾಜಮಹಾರಾಜರುಗಳ ಹೆಸರನ್ನು ಹೇಳುತ್ತವೆ.
ಏನು, ರಾಜಮಹಾರಾಜರು ಕಲ್ಲು ಹೊತ್ತರೆ

ಬೇಬಿಲಾನ್ ನಗರ ಎಷ್ಟೊಂದು ಸಲ ನೆಲಸಮವಾಯಿತು
ಅಷ್ಟು ಸಲವೂ ಅದನ್ನು ಯಾರು ಮತ್ತೆ ಮತ್ತೆ ಕಟ್ಟಿದರು

ಸ್ವರ್ಣೋಜ್ವಲ ಲೀಮಾ ನಗರದಲ್ಲಿ ಕಲ್ಲುಕುಟಿಗರು
ವಾಸಿಸುತ್ತಿದ್ದುದಾದರೂ ಎಲ್ಲಿ

ಚೀನಾದ ದೊಡ್ಡಗೋಡೆಯನ್ನು ಕಟ್ಟಿ ಮುಗಿಸಿದ ಸಂಜೆ
ಅದನ್ನು ಕಟ್ಟಿದವರು ಎಲ್ಲಿ ಹೋದರು

ಮಹಾನಗರ ರೋಮ್ ವಿಜಯತೋರಣಗಳಿಂದ ತುಂಬಿದೆ
ಅವನ್ನು ಯಾರು ನಿಲ್ಲಿಸಿದರು

ಯಾರ ಮೇಲೆ ಸೀಸರರು ವಿಜಯ ಸ್ಥಾಪಿಸಿದರು
ಹಾಡಿ ಹೊಗಳಿಸಿಕೊಂಡ ಬೈಜಾಂಟಿಯಮ್ ನಲ್ಲಿ
ಆವಾಸಿಗಳಿಗೆಲ್ಲ ಅರಮನೆಗಳೇ ಇದ್ದವೆ

ದಂತಕತೆಗಳ ಅಟ್ಲಾಂಟಿಸ್ ಭೂಖಂಡದಲ್ಲಿ ಸಹ
ಅದು ಮಹಾಸಾಗರದಲ್ಲಿ ಮುಳುಗಿಹೋದ ರಾತ್ರಿ
ಮುಳುಗುತ್ತಿದ್ದವರು ಅವರವರ ಗುಲಾಮರನ್ನು ಅರಚಿ ಕರೆಯುತ್ತಿದ್ದರು.

ಯುವ ಅಲೆಕ್ಸಾಂಡರ್ ಭಾರತವನ್ನು ಗೆದ್ದ
ಏನು, ಒಂಟಿಯಾಗಿಯೆ

ಸೀಸರ್ ಗಾಲ್ ಜನರನ್ನು ಸೋಲಿಸಿದ
ಆಗ ಅವನೊಂದಿಗೆ ಒಬ್ಬ ಅಡಿಗೆಭಟ್ಟ ಸಹ ಇರಲಿಲ್ಲವೆ

ಸ್ಪೇನಿನ ಫಿಲಿಪ್ ತನ್ನ ನೌಕಾದಳ ಮುಳುಗಿಹೋದಾಗ ಬಿಕ್ಕಿಬಿಕ್ಕಿ ಅತ್ತ
ಏನು, ಅತ್ತವನು ಅವನೊಬ್ಬನೇಯೆ

ಎರಡನೆ ಫ್ರೆಡರಿಕ್ ಏಳುವರ್ಷಗಳ ಯುದ್ಧದಲ್ಲಿ ಗೆದ್ದ
ಅವನಲ್ಲದೆ ಮತ್ತೆ ಯಾರು ಗೆದ್ದರು

ಒಂದೊಂದು ಪುಟದಲ್ಲೂ ಒಂದೊಂದು ವಿಜಯವಿದೆ
ವಿಜಯಭೋಜನವನ್ನು
ಯಾರು ಅಟ್ಟಿ ಬಡಿಸಿದರು

ಪ್ರತಿ ಹತ್ತು ವರ್ಷಕ್ಕೊಬ್ಬ ಮಹಾಪುರುಷ
ಅವನ ಖರ್ಚನ್ನು ಯಾರು ತೆತ್ತರು

ಎಷ್ಟೊಂದು ಸಂಗತಿಗಳು
ಎಷ್ಟೊಂದು ಪ್ರಶ್ನೆಗಳು.

**ಮಾನವ ಸಮುದಾಯದ ಚರಿತ್ರೆಯಲ್ಲಿ ರಾಜಮಹಾರಾಜರ ಮತ್ತು ಶೂರರಾದ ಸೇನಾನಿಗಳ ಹೆಸರು ಕಂಡುಬರುತ್ತದೆಯೇ ಹೊರತು, ಕೋಟೆಕೊತ್ತಲ ಗಳನ್ನು ಮತ್ತು ಅರಮನೆಗಳನ್ನು ಕಟ್ಟಿದವರ ಇಲ್ಲವೇ ಕಾಳೆಗದಲ್ಲಿ ಪಡೆದ ಜಯಕ್ಕಾಗಿ ರಾಜ ಮಹಾರಾಜರ ಮತ್ತು ಸೇನಾನಿಯ ಪರವಾಗಿ ಹೋರಾಡಿ ಮಡಿದ ಕೋಟಿಗಟ್ಟಲೆ ಮಂದಿ ಶ್ರಮಜೀವಿಗಳ ಹೆಸರಾಗಲಿ ಕಾಣುವುದಿಲ್ಲ. ಆದರೆ ಈ ಜಗತ್ತಿನಲ್ಲಿ ಮಾನವ**

**ಸಮುದಾಯ ಉಳಿದು ಬೆಳೆದು ಬಾಳುತ್ತಿರುವುದು ಕೋಟಿಗಟ್ಟಲೆ ಶ್ರಮಜೀವಿಗಳ ದುಡಿಮೆಯ ಪರಿಶ್ರಮದಿಂದ ಉತ್ಪನ್ನಗೊಂಡ ದವಸಧಾನ್ಯಗಳಿಂದ ಮತ್ತು ನಿರ್ಮಾಣಗೊಂಡ ವಸ್ತುಗಳಿಂದಲೇ ಹೊರತು, ಆಡಳಿತ ಗದ್ದುಗೆಯಲ್ಲಿ ಕುಳಿತಿರುವ ರಾಜ ಮಹಾರಾಜನ ಇಲ್ಲವೇ ವೀರಸೇನಾನಿಯೆಂದು ಹೆಸರುವಾಸಿಯಾದ ಕೆಲವೇ ವ್ಯಕ್ತಿಗಳಿಂದಲ್ಲ ಎಂಬ ಸಂಗತಿಯನ್ನು ಈ ಕವನದಲ್ಲಿ ಹೇಳಲಾಗಿದೆ.**

**ದುಡಿಮೆಗಾರರು**=ಹೊಲಗದ್ದೆತೋಟಗಳಲ್ಲಿ ಹಗಲು ಇರುಳೆನ್ನದೆ ದುಡಿದು ಮಾನವ ಸಮುದಾಯದ ಹಸಿವಿಗೆ ಉಣಿಸನ್ನು ನೀಡುತ್ತಿರುವವರು; ದೊಡ್ಡ ದೊಡ್ಡ ಅರಮನೆಗಳನ್ನು ಒಳಗೊಂಡಂತೆ ಮಾನವರು ಬಾಳುವುದಕ್ಕೆ ಅತ್ಯಗತ್ಯವಾದ ಮನೆಮಠಗಳನ್ನು ಕಟ್ಟುವವರು; ಕೋಟೆಕೊತ್ತಲಗಳನ್ನು, ಅಣೆಕಟ್ಟು ಗಳನ್ನು, ಗುಡಿಗೋಪುರಗಳನ್ನು, ಹೆದ್ದಾರಿಗಳನ್ನು ನಿರ್ಮಿಸುವವರು; ನಾಡನ್ನು ಮತ್ತು ಒಡೆಯನನ್ನು ಕಾಪಾಡುವುದಕ್ಕಾಗಿ ತಮ್ಮ ಜೀವವನ್ನು ಪಣವಾಗಿ ಒಡ್ಡಿ ಕಾಳೆಗದಲ್ಲಿ ಹೋರಾಡುವವರು; ಒಟ್ಟಿನಲ್ಲಿ ಮಾನವ ಸಮುದಾಯದ ನೆಮ್ಮದಿಯ ಬದುಕಿಗೆ ಬೇಕಾದ ಅನ್ನ, ಬಟ್ಟೆ, ವಸತಿಯನ್ನು ಒಳಗೊಂಡಂತೆ ಎಲ್ಲವನ್ನೂ ತಮ್ಮ ದುಡಿಮೆಯಿಂದ ಒದಗಿಸಿಕೊಡುವವರು; ಆದರೆ ನಾಡಿನ ಸಂಪತ್ತಿನಲ್ಲಿ ತಮ್ಮ ದುಡಿಮೆಗೆ ತಕ್ಕ ವರಮಾನವನ್ನು ಇಲ್ಲವೇ ಪಾಲನ್ನು ಪಡೆಯದೆ ಜೀವನದ ಉದ್ದಕ್ಕೂ ಬಡತನದಲ್ಲಿಯೇ ನರಳುತ್ತಿರುವವರು;

ಇಪ್ಪತ್ತನೆಯ ಶತಮಾನಕ್ಕೆ ಮೊದಲು ಜಗತ್ತಿನಲ್ಲಿರುವ ಕೋಟಿಗಟ್ಟಲೆ ದುಡಿಮೆಗಾರರಲ್ಲಿ ಬಹುತೇಕ ಮಂದಿ ಓದುಬರಹವನ್ನು ಕಲಿತವರಲ್ಲ. ಜಾತಿ, ಧರ್ಮ ಮತ್ತು ಕರಿಯರು/ಬಿಳಿಯರು ಎಂಬ ವರ್ಣ ತಾರತಮ್ಯದಿಂದಾಗಿ ಆಸ್ತಿ, ವಿದ್ಯೆ ಮತ್ತು ಆಡಳಿತದ ಗದ್ದುಗೆಯಿಂದ ವಂಚಿತರಾಗಿ ಕಡು ಬಡತನದಲ್ಲಿಯೇ ನರಳುತ್ತಿದ್ದ ದುಡಿಮೆಗಾರರು ತಮ್ಮ ಜೀವನದ ಉದ್ದಕ್ಕೂ ದಿನದ ಎರಡು ಹೊತ್ತು ಹೊಟ್ಟೆ ತುಂಬಾ ಆಹಾರವಿಲ್ಲದೆ, ತೊಡಲು ಸರಿಯಾಗಿ ಬಟ್ಟೆಯಿಲ್ಲದೆ, ವಾಸಿಸಲು ಮನೆಯಿಲ್ಲದವರಾಗಿದ್ದರು. ಹೊಟ್ಟೆಪಾಡಿಗಾಗಿ ಸೇನೆಯನ್ನು ಸೇರಿಕೊಂಡಿದ್ದ ದುಡಿಮೆಗಾರರು ರಾಜಮಹಾರಾಜರ ನಡುವೆ ಪರಸ್ಪರ ಕಾಳೆಗ ನಡೆದಾಗ, ಹೆಚ್ಚಿನ ಸಂಕೆಯಲ್ಲಿ ಸಾವು ನೋವುಗಳಿಗೆ ಗುರಿಯಾಗುತ್ತಿದ್ದರು. ಸೋತು ಸೆರೆಯಾದವರು ಸಾಯುವ ತನಕ ಗೆದ್ದವನಿಗೆ ಗುಲಾಮರಾಗಿ ಬಿಟ್ಟಿಯಾಗಿ ಸೇವೆಯನ್ನು ಸಲ್ಲಿಸುತ್ತಿದ್ದರು. ಜಗತ್ತಿನ ಇತಿಹಾಸದ ಉದ್ದಕ್ಕೂ ಯಶಸ್ಸಿನಿಂದ ಮೆರೆದ ದೊಡ್ಡ ದೊಡ್ಡ ಸಾಮ್ರಾಜ್ಯಗಳ ಏಳುಬೀಳಿನಲ್ಲಿ ಮತ್ತು ರಾಜಮಹಾರಾಜರ ವಿಜಯದ ಅಟ್ಟಹಾಸದಲ್ಲಿ ಲಕ್ಷಾಂತರ ಮಂದಿ ದುಡಿಮೆಗಾರರ ಜೀವಗಳು ಬಲಿಯಾಗಿವೆ.

ಹಸಿವು, ಬಡತನ ಮತ್ತು ಅಪಮಾನದ ಬದುಕಿಗೆ ತಾವು ಹಿಂದಿನ ಜನ್ಮದಲ್ಲಿ ಮಾಡಿದ ಪಾಪಪುಣ್ಯಗಳೇ ಕಾರಣವೆಂಬ ಮಾನಸಿಕ ಗುಲಾಮತನಕ್ಕೆ ಒಳಗಾಗಿದ್ದ ದುಡಿಮೆಗಾರರು ಮೂಕಪ್ರಾಣಿಗಳಂತೆ ಯಾವುದನ್ನು ಪ್ರಶ್ನಿಸದೆ ಬದುಕನ್ನು ಕಳೆಯುತ್ತಿದ್ದರು;

**ಓದು ಬಲ್ಲ ದುಡಿಮೆಗಾರ**=ಅಕ್ಕರದ ವಿದ್ಯೆಯನ್ನು ಕಲಿತು ಓದುಬರಹದಲ್ಲಿ ಜಾಣನಾಗಿರುವ ದುಡಿಮೆಗಾರ. ಲಿಪಿರೂಪದಲ್ಲಿದ್ದ ಬರಹವನ್ನು ಓದತೊಡಗಿದ ದುಡಿಮೆಗಾರನಿಗೆ ಮಾನವ ಸಮುದಾಯದಲ್ಲಿ ದುಡಿಯುವ ಶ್ರಮಜೀವಿಗಳು ಮೇಲು ವರ್ಗ ಮತ್ತು ಮೇಲು ಜಾತಿ/ಮತದ ಜನರಿಂದ ಹೇಗೆ ಸುಲಿಗೆಗೆ ಒಳಗಾಗಿದ್ದಾರೆ ಎಂಬ ಸಾಮಾಜಿಕ ಅರಿವು ದೊರೆಯಿತು. ಅರಿವಿನ ಜತೆಗೆ ತನ್ನ ಬಡತನದ ಬಾಳಿಗೆ ಯಾವ ಬಗೆಯ ವ್ಯವಸ್ಥೆ ಮತ್ತು ಯಾರು ಕಾರಣರು ಎಂಬ ಸಾಮಾಜಿಕ ಎಚ್ಚರವೂ ಮೂಡಿಬಂದಿತು. ಆಡಳಿತದ ಗದ್ದುಗೆಯಲ್ಲಿರುವ ರಾಜ ಮಹಾರಾಜರು, ಜಾತಿಬಲ, ಧರ್ಮದ ಬಲ, ತೋಳ್ಬಲ ಮತ್ತು ಹಣಬಲವುಳ್ಳ ವ್ಯಕ್ತಿಗಳು ಅಧಿಕಾರವನ್ನು ಮತ್ತು ಸಂಪತ್ತನ್ನು ಉಳಿಸಿಕೊಳ್ಳುವುದಕ್ಕಾಗಿ ದುಡಿಮೆಗಾರರ ಮಯ್ ಮನದ ಮೇಲೆ ಯಾವ ಯಾವ ಬಗೆಗಳಲ್ಲಿ ಹತೋಟಿಯನ್ನಿಟ್ಟುಕೊಂಡಿದ್ದಾರೆ ಎನ್ನುವುದು ಮನದಟ್ಟಾಯಿತು.

ಜಾತಿಮತದ ಮೇಲು ಕೀಳಿನ ವ್ಯವಸ್ಥೆ ಮತ್ತು ಸಂಪತ್ತಿನ ವಿತರಣೆಯಲ್ಲಿರುವ ವಂಚನೆ ಹಾಗೂ ಸುಲಿಗೆಯ ನೂರಾರು ಬಗೆಗಳು ದುಡಿಮೆಗಾರರನ್ನು ಹೇಗೆ ತಲೆಯೆತ್ತಿ ಬಾಳದಂತೆ ತಡೆಗಟ್ಟಿವೆ ಎಂಬುದು ಕಂಡುಬಂದಿತು. ದುಡಿಮೆಗಾರರ ಹಸಿವು, ಬಡತನ ಮತ್ತು ಅಪಮಾನಕ್ಕೆ ದೇವರು ಇಲ್ಲವೇ ಹಣೆಬರಹ ಕಾರಣವಲ್ಲ; ಮೇಲು ಜಾತಿ, ಮೇಲು ವರ್ಗ ಮತ್ತು ಆಡಳಿತದಲ್ಲಿರುವವರ ಹುನ್ನಾರಗಳೇ ಕಾರಣವೆಂಬ ಸಂಗತಿಯು ಮನಕ್ಕೆ ನಾಟಿತು. ಇಂತಹ ಸಾಮಾಜಿಕ ಅರಿವು ಮತ್ತು ಎಚ್ಚರದಿಂದಾಗಿಯೇ ದುಡಿಮೆಗಾರನ ಮನದಲ್ಲಿ ಅನೇಕ ಪ್ರಶ್ನೆಗಳು ಮೂಡತೊಡಗಿದವು;

ಸಪ್ತ=ಏಳು; ದ್ವಾರ=ಬಾಗಿಲು; ಥೀಬ್ಸ್ ನಗರ=ಪ್ರಾಚೀನ ಗ್ರೀಸ್ ದೇಶದಲ್ಲಿ ತುಂಬಾ ಹೆಸರುವಾಸಿಯಾಗಿದ್ದ ದೊಡ್ಡ ನಗರ; ಪುಸ್ತಕಗಳು=ಮಾನವ ಸಮುದಾಯದ ಸಾಮಾಜಿಕ, ಧಾರ್ಮಿಕ, ಸಂಪತ್ತಿನ ವಿತರಣೆ, ರಾಜಕೀಯ ಮತ್ತು ಸಾಂಸ್ಕೃತಿಕ ಸಂಗತಿಗಳನ್ನು ವಿವರಿಸಿರುವ ಹೊತ್ತಿಗೆಗಳು;

**ಏನು, ರಾಜಮಹಾರಾಜರು ಕಲ್ಲು ಹೊತ್ತರೆ**=ನಗರವನ್ನು ಕಟ್ಟಿದವರು

ರಾಜಮಹಾರಾಜರಲ್ಲ. ಸಾವಿರಾರು ಮಂದಿ ದುಡಿಮೆಗಾರರ ಪರಿಶ್ರಮದಿಂದ ನಗರ ನಿರ್ಮಾಣವಾಯಿತು ಎಂಬ ವಾಸ್ತವದ ಅರಿವಾಯಿತು;

ನೆಲಸಮ+ಆಯಿತು; ನೆಲಸಮ=ಭೂಮಿಯ ಮಟ್ಟಕ್ಕೆ ಉರುಳುವುದು;

**ಬೇಬಿಲಾನ್ ನಗರ**=ಕ್ರಿಸ್ತ ಪೂರ್ವ ೨೩೦೦ರಲ್ಲಿ ಅಕ್ಕಾಡಿಯನ್ ಸಾಮ್ರಾಜ್ಯದ ಕಾಲದಲ್ಲಿ ನಿರ್ಮಾಣಗೊಂಡಿದ್ದ ಒಂದು ಸಣ್ಣ ಪಟ್ಟಣ. ಅನಂತರದ ಕಾಲದಲ್ಲಿ ದೊಡ್ಡ ನಗರವಾಗಿ ಬೆಳೆಯಿತು. ಕ್ರಿಸ್ತ ಪೂರ್ವ ೧೮೦೦ರಲ್ಲಿ ಹಮ್ಮುರಾಬಿ ಎಂಬ ದೊರೆಯು ಇದನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದ. ಪದೇ ಪದೇ ಶತ್ರುಗಳ ಆಕ್ರಮಣಕ್ಕೆ ಒಳಗಾಗಿ ಅನೇಕ ಸಲ ನೆಲಸಮವಾಗುತ್ತಿತ್ತು. ಕಾಳೆಗದಲ್ಲಿ ಗೆದ್ದ ರಾಜನು ಮತ್ತೆ ಮತ್ತೆ ಹೊಸದಾಗಿ ಬೇಬಿಲಾನ್ ನಗರವನ್ನು ದುಡಿಮೆಗಾರರಿಂದ ಕಟ್ಟಿಸುತ್ತಿದ್ದ. ಈಗ ಈ ನಗರ ಇಲ್ಲ. ಕುಸಿದುಬಿದ್ದಿರುವ ಈ ನಗರದ ಕಟ್ಟಡಗಳ ಪಳೆಯುಳಿಕೆಗಳು ಇಂದಿನ ಇರಾಕ್ ದೇಶದ ಬಾಗ್ದಾದ್ ನಗರದ ಸಮೀಪದಲ್ಲಿ ಕಾಣಸಿಗುತ್ತವೆ;

ಸ್ವರ್ಣ+ಉಜ್ವಲ; ಸ್ವರ್ಣ=ಚಿನ್ನ; ಉಜ್ವಲ=ಕಾಂತಿ/ತೇಜಸ್ಸು; ಸ್ವರ್ಣೋಜ್ವಲ= ಚಿನ್ನದಂತೆ ಹೊಳೆಹೊಳೆಯುತ್ತಿರುವ/ಕಾಂತಿಯಿಂದ ಕಂಗೊಳಿಸುತ್ತಿರುವ; **ಲೀಮಾ ನಗರ**=ದಕ್ಷಿಣ ಅಮೆರಿಕಾ ಪ್ರಾಂತ್ಯದಲ್ಲಿರುವ ಪೆರು ಎಂಬ ಗಣರಾಜ್ಯದ ರಾಜದಾನಿ;

ಕಲ್ಲುಕುಟಿಗ=ಕಲ್ಲಿನ ಬಂಡೆಗಳನ್ನು ಸೀಳಿ ಕಲ್ಲು ಚಪ್ಪಡಿಗಳನ್ನು ಕಲ್ಲು ದಿಂಡುಗಳನ್ನು ಮತ್ತು ಸಣ್ಣ ಸಣ್ಣ ಜಲ್ಲಿಯನ್ನು ತಯಾರು ಮಾಡುವವನು/ ಶಿಲೆಯಲ್ಲಿ ಶಿಲ್ಪವನ್ನು ಕೆತ್ತುವವನು;

**ಸ್ವರ್ಣೋಜ್ವಲ ಲೀಮಾ ನಗರದಲ್ಲಿ ಕಲ್ಲುಕುಟಿಗರು ವಾಸಿಸುತ್ತಿದ್ದುದಾದರೂ ಎಲ್ಲಿ**=ಕಟ್ಟಡಗಳನ್ನು ಕಟ್ಟುವುದಕ್ಕೆ ಅಗತ್ಯವಾದ ಕಲ್ಲಿನ ಸಾಮಗ್ರಿಗಳೆಲ್ಲವನ್ನೂ ಪರಿಶ್ರಮದಿಂದ ನೀಡಿದ ಮತ್ತು ಕಲ್ಲಿನಲ್ಲಿ ಕಲೆಯನ್ನು ರೂಪಿಸಿದ ಕಲ್ಲುಕುಟಿಗರು ತಾವೇ ಕಟ್ಟಿದ ನಗರದಲ್ಲಿ ನೆಲಸಲು ತಮ್ಮದೇ ಆದ ಸ್ವಂತ ನಿವೇಶನವಿಲ್ಲದೆ ಬೀದಿಪಾಲಾಗಿದ್ದಾರೆ;

**ಚೀನಾದ ದೊಡ್ಡಗೋಡೆ:** 'ದಿ ಗ್ರೇಟ್ ವಾಲ್ ಆಫ್ ಚೀನಾ' ಎಂದು ಹೆಸರುವಾಸಿಯಾಗಿರುವ ಈ ಗೋಡೆಯನ್ನು ಚೀನಾ ದೇಶದ ರಾಜನಾದ ಕ್ವಿನ್ ಶಿಹು ವಾಂಗ್ (ಕ್ರಿಸ್ತಪೂರ್ವ ೨೨೦–೨೦೬) ಮೊದಲು ಕಟ್ಟಿಸಿದನು. ಅನಂತರ

ಮಿಂಗ್ ರಾಜವಂಶದ ವರೆಗೆ(ಕ್ರಿಸ್ತಶಕ ೧೩೬೮–೧೬೪೪) ಅನೇಕ ರಾಜರು ಈ ಗೋಡೆಯನ್ನು ವಿಸ್ತರಿಸತೊಡಗಿ ೨೧,೧೯೬ ಕಿಲೋ ಮೀಟರ್ ಉದ್ದದ ಗೋಡೆಯು ಅಂತಿಮವಾಗಿ ನಿರ್ಮಾಣಗೊಂಡಿದೆ. ಅನೇಕ ಶತಮಾನಗಳ ಕಾಲ ನಿರ್ಮಾಣಗೊಂಡ ಈ ಗೋಡೆಯನ್ನು ಕಟ್ಟುವಾಗ ಕೋಟಿಗಟ್ಟಲೆ ದುಡಿಮೆಗಾರರ ಪರಿಶ್ರಮದ ಜತೆಗೆ ಲಕ್ಷಾಂತರ ದುಡಿಮೆಗಾರರು ಸಾವನ್ನಪ್ಪಿದ್ದಾರೆ;

**ಚೀನಾದ ದೊಡ್ಡಗೋಡೆಯನ್ನು ಕಟ್ಟಿ ಮುಗಿಸಿದ ಸಂಜೆ ಅದನ್ನು ಕಟ್ಟಿದವರು ಎಲ್ಲಿ ಹೋದರು**=ಜಗತ್ತಿನ ಅಚ್ಚರಿಗಳಲ್ಲಿ ಒಂದೆಂದು ಹೆಸರುವಾಸಿಯಾದ ಚೀನಾದ ಗೋಡೆಯನ್ನು ಕಟ್ಟಿ ಮುಗಿಸಿದ ದುಡಿಮೆಗಾರರ ಬದುಕಿನಲ್ಲಿ ಮುಂದೆ ಏನಾಯಿತೆಂಬುದು ಯಾರಿಗೂ ತಿಳಿಯದು; ದೊಡ್ಡ ಗೋಡೆ ಎದ್ದು ನಿಂತಿತೇ ಹೊರತು ಅದನ್ನು ಕಟ್ಟಿದ ದುಡಿಮೆಗಾರರ ಬದುಕು ದೊಡ್ಡದಾಗಲಿಲ್ಲ;

**ರೋಮ್ ನಗರ**=ಇಟಲಿ ದೇಶದ ರಾಜಧಾನಿ; ವಿಜಯ=ಗೆಲುವು/ಯಶಸ್ಸು; ತೋರಣ=ಹಬ್ಬ ಇಲ್ಲವೇ ಉತ್ಸವದ ದಿನಗಳಲ್ಲಿ ಮನೆಯ ಬಾಗಿಲುಗಳಿಗೆ ಕಟ್ಟುವ ಹೂವುಗಳ ಮತ್ತು ಮಾವಿನ ತಳಿರಿನ ಮಾಲೆ; ವಿಜಯತೋರಣ=ಜಯಮಾಲೆ;

**ಮಹಾನಗರ ರೋಮ್ ವಿಜಯತೋರಣಗಳಿಂದ ತುಂಬಿದೆ**= ತಮ್ಮ ಸುತ್ತಮುತ್ತಣ ನಾಡುಗಳೆಲ್ಲವನ್ನೂ ಗೆದ್ದು ಕ್ರಿಸ್ತಪೂರ್ವ ೨೭ ರಿಂದ ಕ್ರಿಸ್ತಶಕ ೪೭೬ ರ ವರೆಗೆ ಬಹು ದೊಡ್ಡ ಸಾಮ್ರಾಜ್ಯದ ಒಡೆಯರಾಗಿ ರೋಮನ್ನರು ಜಗತ್ತಿನಲ್ಲಿಯೇ ಹೆಸರುವಾಸಿಯಾಗಿದ್ದರು; ವಿಜಯತೋರಣವನ್ನು ಕಟ್ಟಿ ನಿಲ್ಲಿಸುವಲ್ಲಿ ಲಕ್ಷಾಂತರ ಮಂದಿ ರೋಮನ್ ಪ್ರಜೆಗಳ ಹೋರಾಟ, ತ್ಯಾಗ ಮತ್ತು ಬಲಿದಾನವೇ ಕಾರಣವಾಗಿದೆ;

**ಸೀಸರ್**=ರೋಮ್ ಚಕ್ರವರ್ತಿಗಳಲ್ಲಿ ಜ್ಯೂಲಿಯಸ್ ಸೀಸರ್(ಕ್ರಿಸ್ತಪೂರ್ವ ೧೦೨–೪೪) ಹೆಸರುವಾಸಿಯಾದವನು. ದೊಡ್ಡ ಸೇನಾಬಲದ ಬೆಂಬಲದಿಂದ ಸೀಸರನು ಮೊದಲು ಇತರ ನಾಡುಗಳ ಹಗೆಗಳನ್ನು, ಅನಂತರ ತನಗೆ ತಿರುಗಿಬಿದ್ದ ಆಂತರಿಕ ಶತ್ರುಗಳನ್ನು ಸದೆಬಡಿದನು;

**ಬೈಜಾಂಟಿಯಮ್**=ಒಂದು ಸಾಮ್ರಾಜ್ಯದ ಹೆಸರು. ಇದನ್ನು ಪೂರ್ವ ರೋಮನ್ ಸಾಮ್ರಾಜ್ಯ ಎಂಬ ಹೆಸರಿನಿಂದಲೂ ಗುರುತಿಸಿದ್ದಾರೆ. ಕ್ರಿಸ್ತಶಕ ೪ ನೆಯ ಶತಮಾನದಿಂದ ಕ್ರಿಸ್ತಶಕ ೧೫ ನೆಯ ಶತಮಾನದವರೆಗೂ ಅತ್ಯಂತ ಶಕ್ತಿಶಾಲಿಯಾದ ಸಾಮ್ರಾಜ್ಯವೆಂದು ಹೆಸರುವಾಸಿಯಾಗಿತ್ತು;

ಆವಾಸಿಗಳಿಗೆ+ಎಲ್ಲ; ಆವಾಸಿ=ವಾಸಮಾಡುವವನು;

**ಹಾಡಿ ಹೊಗಳಿಸಿಕೊಂಡ ಬೈಜ್ಯಾಂಟಿಯಮ್‌ನಲ್ಲಿ ಆವಾಸಿಗಳಿಗೆಲ್ಲ ಅರಮನೆಗಳೇ ಇದ್ದವೆ**=ಸಂಪತ್ತಿನಲ್ಲಿ, ಸೇನಾ ಬಲದಲ್ಲಿ ಮತ್ತು ಸಾಂಸ್ಕೃತಿಕವಾಗಿ ಬಹು ದೊಡ್ಡ ಸಾಮ್ರಾಜ್ಯವಾಗಿದ್ದ ಬೈಜಾಂಟಿಯಮ್ ನಲ್ಲಿ ವಾಸಮಾಡುತ್ತಿದ್ದ ವರೆಲ್ಲರೂ ಅರಮನೆಗಳಲ್ಲಿ ನೆಲೆಸಿರಲಿಲ್ಲ. ಸಿರಿವಂತಿಕೆ ತುಂಬಿ ತುಳುಕುತ್ತಿದ್ದ ಈ ಸಾಮ್ರಾಜ್ಯ ದಲ್ಲಿಯೂ ದುಡಿಯುವ ಶ್ರಮಜೀವಿಗಳು ಹಸಿವು, ಬಡತನ ಮತ್ತು ಅಪಮಾನ ದಲ್ಲಿಯೇ ನರಳುತ್ತಿದ್ದರು. ಏಕೆಂದರೆ ನಾಡಿನ ಸಂಪತ್ತು ಕೆಲವರ ಬಳಿ ಮಾತ್ರ ಸಂಗ್ರಹಗೊಂಡಿತ್ತು;

ದಂತಕತೆ=ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ಜನಸಮುದಾಯದಲ್ಲಿ ಬಾಯಿ ಮಾತಿನ ಮೂಲಕ ಹರಡಿಕೊಂಡು ಬಂದ ಕಲ್ಪಿತ ಕತೆ; **ಅಟ್ಲಾಂಟಿಸ್**=ಒಂದು ದ್ವೀಪದ ಹೆಸರು; ಭೂಖಂಡ=ಪ್ರಾಂತ್ಯ/ಪ್ರದೇಶ; ಸಹ=ಸಮೇತವಾಗಿ/ಜೊತೆಯಲ್ಲಿ;

ಗುಲಾಮ=ಅಡಿಯಾಳು/ದಾಸ/ಸೇವಕ; **ಅಟ್ಲಾಂಟಿಸ್ ಭೂಖಂಡ**= ಅಟ್ಲಾಂಟಿಕ್ ಮಹಾಸಾಗರದಲ್ಲಿ ಇದ್ದಿತೆಂದು ಕಲ್ಪಿಸಿಕೊಂಡಿದ್ದ ಒಂದು ದ್ವೀಪದ ಹೆಸರು. ಸಾಗರದ ಅಲೆಗಳ ಉಬ್ಬರವಿಳಿತಕ್ಕೆ ಗುರಿಯಾಗಿ ಈ ದ್ವೀಪವು ಮುಳುಗಿಹೋಯಿತೆಂಬ ದಂತಕತೆಯೊಂದು ಪ್ರಚಲಿತವಾಗಿದೆ.

**ದಂತಕತೆಗಳ ಅಟ್ಲಾಂಟಿಸ್ ಭೂಖಂಡದಲ್ಲಿ ಸಹ ಅದು ಮಹಾಸಾಗರದಲ್ಲಿ ಮುಳುಗಿಹೋದ ರಾತ್ರಿ ಮುಳುಗುತ್ತಿದ್ದವರು ಅವರವರ ಗುಲಾಮರನ್ನು ಅರಚಿ ಕರೆಯುತ್ತಿದ್ದರು**=ದ್ವೀಪವನ್ನು ಆಳುತ್ತಿದ್ದ ರಾಜ ಮತ್ತು ರಾಜ ಪರಿವಾರದವರು ಆಪತ್ತಿನ ಸನ್ನಿವೇಶದಲ್ಲಿ ಕಂಗಾಲಾಗಿ ತಮ್ಮ ಜೀವವನ್ನು ಉಳಿಸಿಕೊಳ್ಳಲೆಂದು ಸೇವಕರಲ್ಲಿ ಮೊರೆಯಿಡುತ್ತಿದ್ದರು. ಅಂದರೆ ರಾಜರು ಬದುಕಿದ್ದಾಗ ಮಾತ್ರವಲ್ಲ, ರಾಜರ ಸಾವಿನ ಸನ್ನಿವೇಶದಲ್ಲಿಯೂ ದುಡಿಯುವ ಶ್ರಮಜೀವಿಗಳಾಗಿದ್ದ ಸೇವಕರು ತಮ್ಮ ಪ್ರಾಣವನ್ನು ಲೆಕ್ಕಿಸದೆ ನೆರವನ್ನು ನೀಡಲೆಂದು ಮುನ್ನುಗ್ಗುತ್ತಿದ್ದರು ಎಂಬ ತಿರುಳನ್ನು ಈ ನುಡಿಗಳು ಸೂಚಿಸುತ್ತಿವೆ;

ಯುವ=ತರುಣ/ಯುವಕ; **ಅಲೆಕ್ಸಾಂಡರ್ (ಕ್ರಿಸ್ತ ಪೂರ್ವ.೩೫೬–೩೨೩).** 'ಅಲೆಕ್ಸಾಂಡರ್ ದಿ ಗ್ರೇಟ್' ಎಂದು ಹೆಸರುವಾಸಿಯಾಗಿರುವ ಅಲೆಕ್ಸಾಂಡರನು ಗ್ರೀಸ್ ದೇಶದ ಒಬ್ಬ ಮಹಾನ್ ದಂಡನಾಯಕ. ಗ್ರೀಸ್ ದೇಶಕ್ಕೆ ಸೇರಿದ ಮಸೆಡೊನಿಯ ರಾಜ್ಯದ ರಾಜ. ಅಲೆಕ್ಸಾಂಡರನು ತನ್ನ ಜೀವಿತ ಕಾಲದಲ್ಲಿ ಬಹು ದೊಡ್ಡ

ಸಾಮ್ರಾಜ್ಯವನ್ನು ಕಟ್ಟಿದನು. ಇವನ ದಂಡಯಾತ್ರೆಯು ಗ್ರೀಸಿನಿಂದ ಹಿಡಿದು ಇಂಡಿಯಾ ದೇಶದ ಹಿಮಾಲಯದ ತಪ್ಪಲಿನವರೆಗೂ ವಿಸ್ತರಿಸಿತ್ತು. ಇಡೀ ಜಗತ್ತನ್ನೇ ಗೆದ್ದು ಎಲ್ಲೆಲ್ಲಿಯೂ ಗ್ರೀಕರ ನಾಗರಿಕತೆಯನ್ನು ನೆಲೆಗೊಳಿಸ ಬೇಕೆಂಬುದು ಇವನ ದೊಡ್ಡ ಆಸೆಯಾಗಿತ್ತು. ಆದರೆ ಇಂಡಿಯಾ ದೇಶದ ಮೇಲಣ ದಂಡಯಾತ್ರೆಯ ನಂತರ ಸಿಂಧೂ ನದಿಯನ್ನು ದಾಟಿ ಕ್ರಿ.ಪೂ. ೩೨೫ರಲ್ಲಿ ಸೂಸ್ ಎಂಬ ಪಟ್ಟಣವನ್ನು ಸೇರಿದ. ಅಲ್ಲಿಂದ ಬ್ಯಾಬಿಲೋನ್ ನಗರಕ್ಕೆ ಹೋದಾಗ, ಜ್ವರದ ಕಾಯಿಲೆಗೆ ಗುರಿಯಾಗಿ ಕೇವಲ ೩೨ನೆಯ ವಯಸ್ಸಿನಲ್ಲಿಯೇ ಸಾವನ್ನಪ್ಪಿದನು.; ಒಂಟಿ=ಒಬ್ಬಂಟಿಗ/ಒಬ್ಬ;

**ಯುವ ಅಲೆಕ್ಸಾಂಡರ್ ಭಾರತವನ್ನು ಗೆದ್ದ. ಏನು, ಒಂಟಿಯಾಗಿಯೆ**= ಅಲೆಕ್ಸಾಂಡರನ ಗೆಲ್ಲುವಿಕೆಯಲ್ಲಿ ಸಾವಿರಾರು ಮಂದಿ ದುಡಿಮೆಗಾರರ ಹೋರಾಟ ಮತ್ತು ಬಲಿದಾನವಾಗಿದೆ;

**ಗಾಲ್ ಜನರು**=ಈಗಿನ ಫ್ರಾನ್ಸ್ ಮತ್ತು ಜರ್ಮನ್ ಪ್ರಾಂತ್ಯದಲ್ಲಿ ಕ್ರಿಸ್ತಪೂರ್ವ ಒಂದು ಮತ್ತು ಎರಡನೆಯ ಶತಮಾನದಲ್ಲಿ ಗಾಲ್ ಎಂಬ ಹೆಸರಿನ ಬುಡಕಟ್ಟಿನ ಜನರಿದ್ದರು. ಇವರನ್ನು ಜೂಲಿಯಸ್ ಸೀಸರನು ದೊಡ್ಡ ಸೇನೆಯೊಡನೆ ಹೋಗಿ ಸೋಲಿಸಿದ್ದನು;

**ಸೀಸರ್ ಗಾಲ್ ಜನರನ್ನು ಸೋಲಿಸಿದ ಆಗ ಅವನೊಂದಿಗೆ ಒಬ್ಬ ಅಡಿಗೆಭಟ್ಟ ಸಹ ಇರಲಿಲ್ಲವೆ**=ಸೀಸರನ ವಿಜಯಯಾತ್ರೆಯು ಅವನೊಬ್ಬನಿಂದ ಆದುದಲ್ಲ. ಸೀಸರನ ಗೆಲುವಿನಲ್ಲಿ ಅಡಿಗೆಯವನು ಪಾತ್ರವು ದೊಡ್ಡದಾಗಿದೆ. ಏಕೆಂದರೆ ಸೇನೆಯ ಜತೆಯಲ್ಲಿ ಅಡಿಗೆಯವರು ಇಲ್ಲದಿದ್ದರೆ , ಕಾದಾಡುವವರು ಹಸಿವಿನ ಸಂಕಟದಲ್ಲಿ ನರಳುತ್ತ ಕಾಳೆಗವನ್ನು ಮಾಡಲಾಗುವುದಿಲ್ಲ;

**ಸ್ಪೇನಿನ ಫಿಲಿಪ್**=ಕ್ರಿಸ್ತಶಕ ೧೫೨೭ರ ಕಾಲದಲ್ಲಿ ಸ್ಪೇನ್ ದೇಶದ ದೊರೆಯಾಗಿದ್ದವನು; ನೌಕಾದಳ=ಹಡಗಿನ ಪಡೆ;

**ಸ್ಪೇನಿನ ಫಿಲಿಪ್ ತನ್ನ ನೌಕಾದಳ ಮುಳುಗಿಹೋದಾಗ ಬಿಕ್ಕಿಬಿಕ್ಕಿ ಅತ್ತ ಏನು, ಅತ್ತವನು ಅವನೊಬ್ಬನೇಯೆ**=ಫಿಲಿಪ್ ದೊರೆಯಂತೆಯೇ ಸಾವಿರಾರು ಮಂದಿ ದುಡಿಯುವ ಶ್ರಮಜೀವಿಗಳು ಸಂಕಟಕ್ಕೆ ಬಲಿಯಾದರು;

**ಎರಡನೆಯ ಫ್ರೆಡರಿಕ್**=ಕ್ರಿಸ್ತಶಕ ೧೭೭೨–೧೭೮೬ ರ ಕಾಲದಲ್ಲಿ ಪರ್ಶಿಯಾ ದೇಶದ ದೊರೆಯಾಗಿದ್ದವನು;

**ಎರಡನೆ ಫ್ರೆಡರಿಕ್ ಏಳುವರ್ಷಗಳ ಯುದ್ಧದಲ್ಲಿ ಗೆದ್ದ ಅವನಲ್ಲದೆ ಮತ್ತೆ ಯಾರು ಗೆದ್ದರು**=ರಾಸ್ ಬಾಕ್ ಎಂಬ ಜಾಗದಲ್ಲಿ ಫ್ರಾಂಕೊ–ಆಸ್ಟ್ರಿಯನ್ ಸೇನೆಯೊಡನೆ ನಡೆದ ಏಳು ವರುಶಗಳ ಕಾಳೆಗದಲ್ಲಿ ಗೆಲುವು ದೊರೆಯಲು ಇವನೊಬ್ಬನೇ ಕಾರಣನಲ್ಲ. ಇವನ ಪರವಾಗಿ ಲಕ್ಷಾಂತರ ಮಂದಿ ವೀರರು ಹೋರಾಡಿ ಸಾವು ನೋವುಗಳಿಗೆ ಒಳಗಾಗಿ ಜಯವನ್ನು ತಂದಿತ್ತರು;

ಪುಟ=ಪುಸ್ತಕದ ಹಾಳೆ; ಭೋಜನ=ಊಟ; ವಿಜಯಭೋಜನ=ಗೆಲುವಿನ ಆನಂದಕ್ಕಾಗಿ ಅಣಿಗೊಳಿಸಿರುವ ಊಟ; ಅಡು=ಅಡಿಗೆ ಮಾಡು; ಬಡಿಸು=ಉಣಲು ನೀಡುವುದು;

**ಒಂದೊಂದು ಪುಟದಲ್ಲೂ ಒಂದೊಂದು ವಿಜಯವಿದೆ ವಿಜಯ ಭೋಜನವನ್ನು ಯಾರು ಅಟ್ಟಿ ಬಡಿಸಿದರು**=ಜಗತ್ತಿನ ಉದ್ದಗಲದಲ್ಲಿರುವ ನಾಡುಗಳಲ್ಲಿ ಎಲ್ಲ ಶತಮಾನಗಳಲ್ಲಿಯೂ ಒಂದಲ್ಲ ಒಂದು ಬಗೆಯ ವಿಜಯದ ಪ್ರಸಂಗಗಳಿವೆ. ಆದರೆ ಇಂತಹ ವಿಜಯಗಳ ಶ್ರೇಯಸ್ಸು ಮತ್ತು ಕೀರ್ತಿಯನ್ನು ನಾಡಿಗೆ ತಂದು ಕೊಟ್ಟವರು ಕೋಟಿಗಟ್ಟಲೆ ಶ್ರಮಜೀವಿಗಳೇ ಹೊರತು ಬೆರಳೆಣಿಕೆಯ ರಾಜಮಹಾರಾಜರು ಗಳಲ್ಲ ಎಂಬ ರೂಪಕದ ತಿರುಳಿನಲ್ಲಿ ಈ ನುಡಿಗಳು ಬಳಕೆಗೊಂಡಿವೆ;

ಮಹಾಪುರುಷ=ದೊಡ್ಡ ವ್ಯಕ್ತಿ; ಖರ್ಚು=ವೆಚ್ಚ/ವ್ಯಯ; ತೆರು=ಕೊಡು/ನೀಡು;

**ಪ್ರತಿ ಹತ್ತು ವರ್ಷಕ್ಕೊಬ್ಬ ಮಹಾಪುರುಷ. ಅವನ ಖರ್ಚನ್ನು ಯಾರು ತೆತ್ತರು**= ಮಾನವ ಸಮುದಾಯದ ಬದುಕಿನಲ್ಲಿ ಮಹಾವ್ಯಕ್ತಿಯೆಂದು ಹೆಸರು ಪಡೆದವರು ಆಗಾಗ್ಗೆ ಕಂಡುಬರುತ್ತಲೇ ಇರುತ್ತಾರೆ. ಆದರೆ ಆ ರೀತಿ ಒಬ್ಬ ಸಾಮಾನ್ಯ ವ್ಯಕ್ತಿಯು ಮಹಾವ್ಯಕ್ತಿಯೆಂದು ಹೆಸರುವಾಸಿಯಾಗಲು ಅವನ ಕಾಲದ ಕೋಟಿಗಟ್ಟಲೆ ದುಡಿಮೆಗಾರರ ಪರಿಶ್ರಮ, ತ್ಯಾಗ ಮತ್ತು ಬಲಿದಾನಗಳೇ ಕಾರಣ ವಾಗಿರುತ್ತವೆ ಎಂಬ ರೂಪಕದ ತಿರುಳಿನಲ್ಲಿ ಈ ನುಡಿಗಳು ಬಳಕೆಗೊಂಡಿವೆ;

ಎಷ್ಟೊಂದು=ಅನೇಕ/ಬಹಳ; ಸಂಗತಿ=ವಿಚಾರ/ಸುದ್ದಿ/ಪ್ರಸಂಗ; ಪ್ರಶ್ನೆ= ಇತರರಿಂದ ಯಾವುದಾದರೂ ವಸ್ತು/ವ್ಯಕ್ತಿ/ಪ್ರಸಂಗದ ಬಗ್ಗೆ ವಿಚಾರಗಳನ್ನು ತಿಳಿದುಕೊಳ್ಳುವುದಕ್ಕಾಗಿ ಆಡುವ ಮಾತುಗಳು;

**ಎಷ್ಟೊಂದು ಸಂಗತಿಗಳು... ಎಷ್ಟೊಂದು ಪ್ರಶ್ನೆಗಳು**= ನಮ್ಮ ಕಣ್ಣಮುಂದಿನ ಜಗತ್ತಿನಲ್ಲಿ ನಡೆಯುತ್ತಿರುವ ವಿದ್ಯಮಾನಗಳನ್ನು ಸಾಮಾಜಿಕ ಅರಿವು ಮತ್ತು ಎಚ್ಚರದಿಂದ ನೋಡಿದಾಗ, ನೂರಾರು ಬಗೆಯ ಪ್ರಶ್ನೆಗಳು ಓದು ಬಲ್ಲ ದುಡಿಮೆಗಾರನೊಬ್ಬನನ್ನು ಕಾಡುವಂತೆಯೇ ಎಲ್ಲರನ್ನು ಕಾಡತೊಡಗುತ್ತವೆ.

# ೫. ಪುಸ್ತಕ ದಹನ

**ಅನುವಾದ: ಶಾ.ಬಾಲುರಾವ್**

ಹಾನಿಕಾರಕ ಪುಸ್ತಕಗಳನ್ನು
ಸಾರ್ವಜನಿಕವಾಗಿ ಸುಡಬೇಕೆಂದು
ಸರಕಾರ ಸುಗ್ರೀವಾಜ್ಞೆ ಹೊರಡಿಸಿತ್ತು.

ಎಲ್ಲೆಲ್ಲೂ ಪುಸ್ತಕಗಳನ್ನು
ಎತ್ತಿನ ಗಾಡಿಗಳಲ್ಲಿ ಹೇರಿ
ಸುಡುಕೊಂಡಕ್ಕೆ ಹೊಡೆದುಕೊಂಡು ಹೋಗುತ್ತಿದ್ದರು

ಆಗ ಒಬ್ಬ ಬಹಿಷ್ಕೃತ ಸಾಹಿತಿ, ಶ್ರೇಷ್ಠರಲ್ಲೊಬ್ಬ
ಸುಡಲಿರುವ ಪುಸ್ತಕಗಳ ಪಟ್ಟಿಯಲ್ಲಿ
ತನ್ನ ಕೃತಿಗಳ ಹೆಸರಿಲ್ಲದ್ದನ್ನು ನೋಡಿ ಹೌಹಾರಿದ

ತಕ್ಷಣ ಕೋಪದ ಭರದಲ್ಲಿ ಮೇಜಿಗೆ ಧಾವಿಸಿ
ಅಧಿಕಾರಿಗಳಿಗೆ ಪತ್ರ ಗೀಚಿದ:
ಸುಡಿ, ನನ್ನನ್ನು ಸುಡಿ!
ಲೇಖನಿ ಹಕ್ಕಿವೇಗದಲ್ಲಿ ಹಾರಿತ್ತು

ನನ್ನನ್ನು ಸುಡಿ!
ನನಗೇನೂ ಪರವಾಗಿಲ್ಲ!... ನನ್ನನ್ನು ಬಿಡಬೇಡಿ!
ನನ್ನ ಪುಸ್ತಕಗಳು ಯಾವಾಗಲೂ ಸತ್ಯವನ್ನೇ ಸಾರಿಲ್ಲವೆ
ಈಗ ನಿಮ್ಮಿಂದ ನಾನು ಸುಳ್ಳನೆನಿಸಿಕೊಳ್ಳಬೇಕೇನು
ಇದು ನನ್ನ ಆಜ್ಞೆ... ನನ್ನನ್ನು ಸುಡಿ!

**ಸರಕಾರದ ಕಟ್ಟಪ್ಪಣೆಯಂತೆ ಸುಡಲಿರುವ ಪುಸ್ತಕಗಳ ಆಯ್ಕೆಯ ಪಟ್ಟಿಯಲ್ಲಿ ತನ್ನ ಪುಸ್ತಕವಿಲ್ಲದ್ದನ್ನು ಕಂಡು ಆತಂಕಕ್ಕೆ ಒಳಗಾಗಿ, ಆಕ್ರೋಶಗೊಂಡು ಬಡಬಡಿಸುತ್ತಿರುವ ಹೆಸರಾಂತ ಸಾಹಿತಿಯೊಬ್ಬನ ಅಳಲನ್ನು ಈ ಕವನದಲ್ಲಿ ಚಿತ್ರಿಸಲಾಗಿದೆ.**

ಪುಸ್ತಕ=ಮಾನವ ಸಮುದಾಯದ ಸಾಮಾಜಿಕ, ಧಾರ್ಮಿಕ, ರಾಜಕೀಯ, ವಿಜ್ಞಾನ, ತಂತ್ರಜ್ಞಾನ, ಸಂಪತ್ತಿನ ವಿತರಣೆ, ಕಲೆ, ಸಂಗೀತ, ಸಾಹಿತ್ಯ ಮತ್ತು ನಿಸರ್ಗವನ್ನು ಒಳಗೊಂಡಂತೆ ಜಗತ್ತಿನ ಎಲ್ಲಾ ಬಗೆಯ ಚಟುವಟಿಕೆಗಳ ಸಂಗತಿಗಳನ್ನು ಬರಹರೂಪದಲ್ಲಿ ತಿಳಿಸುವ ಹೊತ್ತಿಗೆಗಳು;

ದಹನ=ಸುಡುವಿಕೆ/ಸುಟ್ಟು ಬೂದಿ ಮಾಡುವುದು;

**ಪುಸ್ತಕ ದಹನ**=ಎರಡು ಸೇನೆಗಳ ನಡುವೆ ಕಾಳೆಗ ನಡೆದಾಗ, ಕಾಳೆಗದಲ್ಲಿ ಸೋಲನ್ನಪ್ಪಿದ ನಾಡಿನ ಜನರ ಆಸ್ತಿಪಾಸ್ತಿಗಳನ್ನು ಲೂಟಿ ಮಾಡಿ, ಮಾನಪ್ರಾಣ ಗಳನ್ನು ತೆಗೆಯುತ್ತಿದ್ದ ಗೆದ್ದ ಸೇನೆಯ ದಾಳಿಕೋರರು ಸೋತ ಪಂಗಡದವರ ಬಳಿಯಿದ್ದ ಪುಸ್ತಕಗಳನ್ನೂ ಸುಡುತ್ತಿದ್ದರು. ಅರಿವಿನ ಆಕರವಾಗಿ ಬರಹರೂಪ ದಲ್ಲಿದ್ದ ಪುಸ್ತಕಗಳನ್ನು ಸುಡುವುದರ ಮೂಲಕ ಸೋತ ಜನ ಸಮುದಾಯದ ಮುಂದಿನ ತಲೆಮಾರುಗಳಿಗೆ ಆ ಸಮುದಾಯದ ಆಚಾರವಿಚಾರಗಳು, ಸಾಧನೆ ಸಂಶೋಧನೆಗಳು ಮತ್ತು ಜ್ಞಾನದ ಸಂಪತ್ತು ಸಂವಹನಗೊಳ್ಳದಂತೆ ನಾಶಗೊಳಿಸುತ್ತಿದ್ದರು;

**ಸರಕಾರ**=ಒಂದು ನಾಡಿನ ಆಡಳಿತದ ಗದ್ದುಗೆಯ ಚುಕ್ಕಾಣಿಯನ್ನು ಹಿಡಿದು, ಪ್ರಜೆಗಳನ್ನು ತನ್ನ ಹತೋಟಿಯಲ್ಲಿಟ್ಟುಕೊಂಡಿರುವ ಒಕ್ಕೂಟ. ಈ ಒಕ್ಕೂಟದಲ್ಲಿ ರಾಜಶಾಹಿ ಮತ್ತು ಪುರೋಹಿತಶಾಹಿ ಎಂಬ ಎರಡು ಅಂಗಗಳು ಜತೆಗೂಡಿರುತ್ತವೆ.

**ರಾಜಶಾಹಿ:** ರಾಜಮನೆತನದ ವಂಶವಾಹಿಯಿಂದ ಬಂದಿರುವ ರಾಜ/ ಸೇನಾಬಲದಿಂದ ಗದ್ದುಗೆಯನ್ನೇರಿರುವ ಸರ್ವಾಧಿಕಾರಿ/ಪ್ರಜಾಪ್ರಭುತ್ವದಿಂದ ಆಯ್ಕೆಗೊಂಡ ನಾಯಕ / ಸಮತಾವಾದ ಇಲ್ಲವೇ ಸಮಾಜವಾದದ ಚಳುವಳಿಯಲ್ಲಿ ರೂಪುಗೊಂಡು ಗದ್ದುಗೆಯನ್ನು ಪಡೆದಿರುವ ವ್ಯಕ್ತಿ; ರಾಜಶಾಹಿಯು ಪ್ರಜೆಗಳ ಬಹಿರಂಗದ ಚಲನವಲನಗಳನ್ನು ತನ್ನ ನಿಯಂತ್ರಣದಲ್ಲಿಟ್ಟುಕೊಂಡು, ಅವರನ್ನು ಅಡಿಯಾಳುಗಳನ್ನಾಗಿ ಮಾಡಿಕೊಂಡಿರುತ್ತದೆ;

**ಪುರೋಹಿತಶಾಹಿ:**ಇದರಲ್ಲಿ ಮೇಲುಜಾತಿ, ಪ್ರಬಲ ಕೋಮು ಮತ್ತು ಮೇಲು ವರ್ಗದ ಜನರು ಇರುತ್ತಾರೆ. ಪುರೋಹಿತಶಾಹಿಯು ಜಾತಿ ಮತ ದೇವರ ಹೆಸರಿನಲ್ಲಿ ಜನಮನದಲ್ಲಿ ಬಹುಬಗೆಯ ನಂಬಿಕೆಗಳು ನೆಲೆಗೊಳ್ಳುವಂತಹ

ಆಚರಣೆಗಳ ಮೂಲಕ ಪ್ರಜೆಗಳ ಮನಸ್ಸನ್ನು ತನ್ನ ಹತೋಟಿಯಲ್ಲಿಟ್ಟು ಕೊಂಡಿರುತ್ತದೆ. ಪುರೋಹಿತಶಾಹಿಯು ಒಂದು ನಾಡಿನಲ್ಲಿರುವ ಬೇರೆ ಬೇರೆ ಜಾತಿ ಮತ ಜನಾಂಗದ ಹೆಣಿಗೆಯಿಂದ ಕೂಡಿರುವ ಜನಸಮುದಾಯವು ಒಗ್ಗಟಿನಿಂದ ಜತೆಗೂಡಿ ಒಲವು ನಲಿವು ನೆಮ್ಮದಿಯಿಂದ ಬಾಳುವುದಕ್ಕೆ ಅವಕಾಶವನ್ನು ನೀಡದಂತಹ ತಾರತಮ್ಯದ ಒಳಮಿಡಿತಗಳನ್ನು ಜನಮನದಲ್ಲಿ ಬಿತ್ತಿ, ಜನರು ಪರಸ್ಪರ ಅನುಮಾನ, ಅಸೂಯೆ ಮತ್ತು ಹಗೆತನದಿಂದ ನಿರಂತರವಾಗಿ ಹೊಡೆದಾಡುತ್ತಿರುವಂತೆ ಅನೇಕ ಹುನ್ನಾರಗಳನ್ನು ಹೂಡುತ್ತಿರುತ್ತದೆ;

**ರಾಜಶಾಹಿಯು ಪ್ರಜೆಗಳ ದೇಹದ ಮೇಲೆ ಹತೋಟಿಯನ್ನು ಹೊಂದಿದ್ದರೆ, ಪುರೋಹಿತಶಾಹಿಯು ಪ್ರಜೆಗಳ ಮನಸ್ಸಿನ ಮೇಲೆ ಹತೋಟಿಯನ್ನು ಹೊಂದಿರುತ್ತದೆ;**

**ಸುಗ್ರೀವಾಜ್ಞೆ**=ಇದೊಂದು ನುಡಿಗಟ್ಟು. ನಾಡಿನ ಉನ್ನತ ಅಧಿಕಾರದಲ್ಲಿರುವವರು ಹೊರಡಿಸುವ ಕಟ್ಟಪ್ಪಣೆ ಎಂಬ ತಿರುಳಿನಲ್ಲಿ ಬಳಕೆಯಾಗುತ್ತದೆ; ಹೊರಡಿಸಿತ್ತು=ಪ್ರಕಟಿಸಿತ್ತು:

ಹಾನಿ=ಕೇಡು/ನಾಶ; ಕಾರಕ=ಉಂಟುಮಾಡುವ; ಹಾನಿಕಾರಕ=ಕೆಡುಕನ್ನು ಉಂಟುಮಾಡುವ; **ಹಾನಿಕಾರಕ ಪುಸ್ತಕಗಳು**=ಸರಕಾರ ಅದು ಯಾವುದೇ ಬಗೆಯದಾಗಿರಲಿ, ಉದಾಹರಣೆಗೆ: ರಾಜವಂಶ/ಸರ್ವಾಧಿಕಾರ/ಪ್ರಜಾಪ್ರಭುತ್ವ/ಮಿಲಿಟರಿ/ಕಮ್ಯುನಿಸಮ್/ಸೋಶಿಯಲಿಸಮ್ ಆಡಳಿತಕ್ಕೆ ಒಳಪಟ್ಟಿರಲಿ, ಈ ಕೆಳಕಂಡ ಸಂಗತಿಗಳನ್ನು ಒಳಗೊಂಡ ಪುಸ್ತಕಗಳನ್ನು ಹಾನಿಕಾರಕ ಪುಸ್ತಕಗಳೆಂದು ಪರಿಗಣಿಸುತ್ತದೆ.

ಆಡಳಿತದ ಗದ್ದುಗೆಯಲ್ಲಿರುವ ವ್ಯಕ್ತಿಗಳು ಮತ್ತು ನಾಡಿನ ಸಂಪತ್ತಿನಲ್ಲಿ ಬಹುದೊಡ್ಡ ಪಾಲನ್ನು ಪಡೆಯುತ್ತಿರುವ ಮೇಲುಜಾತಿ, ಪ್ರಬಲ ಕೋಮು ಮತ್ತು ಮೇಲು ವರ್ಗದವರು ದುಡಿಯುವ ವರ್ಗದ ಬಡಜನತೆಗೆ ಮಾಡುತ್ತಿರುವ ವಂಚನೆ ಮತ್ತು ಸುಲಿಗೆಯ ಬಗೆಗಳನ್ನು ಹಾಗೂ ಜಾತಿ ಮತ ದೇವರ ಹೆಸರಿನಲ್ಲಿ ಸಮಾಜದಲ್ಲಿ ನಡೆಯುತ್ತಿರುವ ಕಪಟತನದ ಆಚರಣೆಗಳ ಹಿಂದೆ ಅಡಗಿರುವ ವಾಸ್ತವದ ಸಂಗತಿಗಳನ್ನು ಜನಸಾಮಾನ್ಯರು ಅರಿತುಕೊಳ್ಳುವಂತೆ ಬರೆದಿರುವ ವಿಚಾರಗಳನ್ನುಳ್ಳ ಪುಸ್ತಕಗಳನ್ನು ಹಾನಿಕಾರಕ ಪುಸ್ತಕಗಳೆಂದು ಸರಕಾರ ಪರಿಗಣಿಸುತ್ತದೆ. ಅಂತಹ ಪುಸ್ತಕಗಳನ್ನು ಪ್ರಜೆಗಳು ಓದುವುದರಿಂದ ಇಲ್ಲವೇ ಕೇಳಿ ತಿಳಿಯುವುದರಿಂದ ದುಡಿಯುವ ವರ್ಗದ ಬಡಜನರು ಪ್ರಚೋದಿತರಾಗಿ ದಂಗೆ

ಏಳಬಹುದು ಇಲ್ಲವೇ ದೇಶದಲ್ಲಿ ಜಾರಿಯಲ್ಲಿರುವ ಜನವಿರೋಧಿ ಕಾನೂನು ಕಟ್ಟಲೆಗಳ ಎದುರು ಹೋರಾಡಬಹುದು ಎಂಬ ಆತಂಕಕ್ಕೆ ಸರಕಾರ ಒಳಗಾಗುತ್ತದೆ. ಈ ಹಿನ್ನೆಲೆಯಲ್ಲಿ ಪ್ರಜೆಗಳಲ್ಲಿ ಸಾಮಾಜಿಕ ಅರಿವು ಮತ್ತು ಸಾಮಾಜಿಕ ಎಚ್ಚರವನ್ನು ಮೂಡಿಸುವ ಸಂಗತಿಗಳನ್ನೊಳಗೊಂಡ ಪುಸ್ತಕಗಳೆಲ್ಲವನ್ನೂ ಹಾನಿಕಾರಕ ಪುಸ್ತಕಗಳೆಂದೇ ಸರಕಾರ ನಿರ್ಣಯಿಸುತ್ತದೆ;

ಸಾರ್ವಜನಿಕ=ಎಲ್ಲ ಜನರು/ಬಹಿರಂಗವಾದುದು; ಸುಡಬೇಕು+ಎಂದು; ಸುಡು=ಬೆಂಕಿಯ ತಾಪ ತಟ್ಟುವಂತೆ ಮಾಡುವುದು;

ಎಲ್ಲೆಲ್ಲೂ=ನಾಡಿನ ಉದ್ದಗಲದಲ್ಲಿ/ಎಲ್ಲ ಕಡೆಗಳಲ್ಲಿಯೂ; ಹೇರು=ಒಂದರ ಮೇಲೆ ಮತ್ತೊಂದನ್ನು, ಮತ್ತೊಂದರ ಮೇಲೆ ಮಗದೊಂದನ್ನು ಅಡುಕಿಕೊಂಡು; ಕೊಂಡ=ಬೆಂಕಿಯನ್ನು ಹಾಕಿ ಉರಿಸಲೆಂದು ತೋಡಿರುವ ಗುಳಿ/ಗುಣಿ; ಸುಡುಕೊಂಡ=ವಸ್ತುಗಳನ್ನು ಹಾಕಿ ಸುಡುವುದಕ್ಕಾಗಿ ದೊಡ್ಡ ಗುಂಡಿಯನ್ನು ತೋಡಿ, ಅಲ್ಲಿ ಬೆಂಕಿಯನ್ನು ಒಡ್ಡಿರುವ ಜಾಗ;

ಬಹಿಷ್ಕೃತ=ಹೊರಹಾಕಲ್ಪಟ್ಟವನು/ಹೊರದೂಡಲ್ಪಟವನು; ಸಾಹಿತಿ=ನುಡಿ ಸಾಮಗ್ರಿಗಳಾದ ಅಕ್ಕರ–ಪದ–ವಾಕ್ಯ–ತಿರುಳಿನ ಮೂಲಕ ಕಲಾತ್ಮಕವಾಗಿ ಪದ್ಯ, ಗದ್ಯ, ನಾಟಕ ಮತ್ತು ಇನ್ನಿತರ ಬರಹಗಳನ್ನು ರಚಿಸುವ ವ್ಯಕ್ತಿ;

**ಬಹಿಷ್ಕೃತ ಸಾಹಿತಿ**=ಸರಕಾರವು ದೂರವಿಟ್ಟಿದ್ದ ಒಬ್ಬ ಸಾಹಿತಿ; ಆಳುವ ಸರಕಾರಗಳು ಬರಹಗಾರರ ಬಗ್ಗೆ ಸಾಮಾನ್ಯವಾಗಿ ಒಂದು ಬಗೆಯ ತಿರಸ್ಕಾರದ ನಿಲುವನ್ನು ಹೊಂದಿರುತ್ತವೆ. ಏಕೆಂದರೆ ಬರಹದ ಮೂಲಕ ಪ್ರಜೆಗಳು ಅರಿವು ಮತ್ತು ಎಚ್ಚರವನ್ನು ಹೊಂದಬಲ್ಲರು ಎಂಬ ಆತಂಕ ಸರಕಾರಕ್ಕೆ ಯಾವಾಗಲೂ ಇದ್ದೇ ಇರುತ್ತದೆ;

ಶ್ರೇಷ್ಠರಲ್ಲಿ+ಒಬ್ಬ; ಶ್ರೇಷ್ಠ=ಉತ್ತಮ/ಒಳ್ಳೆಯ;

ಕೃತಿ=ಪುಸ್ತಕ; ಹೆಸರು+ಇಲ್ಲದ್ದನ್ನು; ಹೌಹಾರಿದ=ಗಾಬರಿಗೊಂಡನು; ತಕ್ಷಣ= ಕೂಡಲೇ/ಮರುಗಳಿಗೆಯಲ್ಲಿಯೇ; ಕೋಪ=ಸಿಟ್ಟು/ಆಕ್ರೋಶ; ಭರ=ಉದ್ರೇಕ/ ಆವೇಶ/ತೀವ್ರತೆ; ಧಾವಿಸಿ=ವೇಗವಾಗಿ ಬಳಿಸಾರಿ ಬಂದು; ಅಧಿಕಾರಿಗಳಿಗೆ= ಸರಕಾರದ ಅಪ್ಪಣೆಯಂತೆ ಪುಸ್ತಕಗಳನ್ನು ಸುಡಲಿರುವ ವ್ಯಕ್ತಿಗಳಿಗೆ; ಗೀಚಿದ=ಆತುರಾತುರವಾಗಿ ಬರೆದ;

ಲೇಖನಿ=ಬರಹ/ಪತ್ರ/ಓಲೆ; ಹಕ್ಕಿವೇಗ=ಇದೊಂದು ನುಡಿಗಟ್ಟು. ಬಹಳ

ವೇಗವಾಗಿ; **ಹಕ್ಕಿವೇಗದಲಿ ಹಾರಿತ್ತು**=ತುಸು ಸಮಯದಲ್ಲಿಯೇ ಅಧಿಕಾರಿಗಳ ಕಯ್ಗೆ ತಲುಪಿತ್ತು; ನನಗೇನೂ ಪರವಾಗಿಲ್ಲ=ನಾನು ಸತ್ತರೂ ಚಿಂತೆಯಿಲ್ಲ;

ಸತ್ಯ=ದಿಟ/ನಿಜ/ವಾಸ್ತವ; ಸಾರು+ಇಲ್ಲವೆ; ಸಾರು=ಪ್ರಕಟಿಸು/ಗಟ್ಟಿದನಿಯಲ್ಲಿ ನುಡಿ/ನಿಶ್ಚಿತವಾಗಿ ಹೇಳು; ಸತ್ಯವನ್ನು ಸಾರುವುದು=ದಿಟದ ಸಂಗತಿಗಳನ್ನು ತಿಳಿಸುವುದು; ಸುಳ್ಳನು+ಎನಿಸಿಕೊಳ್ಳಬೇಕೇನು; ಸುಳ್ಳ=ಕಟ್ಟುಕತೆಯನ್ನು ಕಟ್ಟುವವನು/ನಿಜದ ಸಂಗತಿಯನ್ನು ಮುಚ್ಚಿಡುವವನು; ಆಜ್ಞೆ=ಅಪ್ಪಣೆ/ಆದೇಶ;

**ನನ್ನ ಪುಸ್ತಕಗಳು ಯಾವಾಗಲೂ ಸತ್ಯವನ್ನೇ ಸಾರಿಲ್ಲವೆ...ಈಗ ನಿಮ್ಮಿಂದ ನಾನು ಸುಳ್ಳನೆನಿಸಿಕೊಳ್ಳಬೇಕೇನು ಇದು ನನ್ನ ಆಜ್ಞೆ‚ನನ್ನನ್ನು ಸುಡಿ!**= ಈಗ ಈ ಹೆಸರಾಂತ ಸಾಹಿತಿಗೆ ತಾನು ರಚಿಸಿದ್ದ ಪುಸ್ತಕಗಳ ಮಿತಿ ಮನದಟ್ಟಾಗಿದೆ. ತಾನು ಇದುವರೆಗೂ ರಚಿಸಿದ್ದ ಬರಹವೆಲ್ಲವೂ ಗದ್ದುಗೆಯಲ್ಲಿದ್ದವರ, ಸಿರಿವಂತರ, ಜಾತಿ ಮತ ದೇವರ ಹೆಸರಿನಲ್ಲಿ ಜನರನ್ನು ವಂಚಿಸುತ್ತಿದ್ದವರ ಪರವಾಗಿತ್ತೇ ಹೊರತು, ನಾಡಿಗೆ ಅಗತ್ಯವಾದುದೆಲ್ಲವನ್ನೂ ನೀಡಿ ಜನಸಮುದಾಯಕ್ಕಾಗಿ ದುಡಿದು ಹಸಿವು ಬಡತನ ಮತ್ತು ಅಪಮಾನದಲ್ಲಿ ನೋಯುತ್ತಿರುವವರ ಪರವಾಗಿ ಇರಲಿಲ್ಲವೆಂಬ ದಿಟ ಗೋಚರಿಸಿದೆ. ಸಾಮಾಜಿಕ ಅನ್ಯಾಯವನ್ನಾಗಲಿ, ಧರ್ಮದ ಹೆಸರಿನಲ್ಲಿ ನಡೆಯುತ್ತಿರುವ ವಂಚನೆಯನ್ನಾಗಲಿ ಇಲ್ಲವೇ ಸಂಪತ್ತಿನ ವಿತರಣೆಯಲ್ಲಿ ಮಾಡಿರುವ ಬಡವ/ಬಲ್ಲಿದರ ನಡುವಣ ದೊಡ್ಡ ಅಂತರದ ವ್ಯವಸ್ಥೆಯನ್ನಾಗಲಿ ತನ್ನ ಬರಹಗಳು ಎಂದಿಗೂ ಪ್ರಸ್ತಾಪ ಮಾಡಿಲ್ಲವಾದ್ದರಿಂದ, ತನ್ನ ಪುಸ್ತಕವನ್ನು ಸರಕಾರವು ಹಾನಿಕಾರಕವೆಂದು ಪರಿಗಣಿಸಿಲ್ಲವೆಂಬ ಸತ್ಯ ಗೋಚರಿಸುತ್ತದೆ. ತನ್ನ ಬರಹ ಮತ್ತು ತನ್ನ ವ್ಯಕ್ತಿತ್ವದ ಬಗ್ಗೆ ತನ್ನಲ್ಲಿಯೇ ಮೂಡಿದ ತಿರಸ್ಕಾರದ ಒಳಮಿಡಿತಗಳನ್ನು ಹತ್ತಿಕ್ಕಿಕೊಳ್ಳಲಾಗದೆ, ಜನರ ಒಳಿತಿಗಾಗಿ ಮಿಡಿಯದ ಸಾಹಿತ್ಯವನ್ನು ಬರೆದಿರುವ ನನ್ನಂತಹವನ ಬದುಕಿಗಾಗಲಿ ಇಲ್ಲವೇ ಬರಹಕ್ಕಾಗಲಿ ಯಾವುದೇ ಬೆಲೆಯಿಲ್ಲವೆಂಬ ತಿರುಳಿನಲ್ಲಿ ಈ ನುಡಿಗಳು ಬಳಕೆಗೊಂಡಿವೆ;

ಈ ಕವನದ ಓದಿಗೆ ಪೂರಕವಾಗಿ ಜರ್ಮನಿ ದೇಶ ಮತ್ತು ಬ್ರೆಕ್ಟ್ ಕವಿಯ ಬಗೆಗಿನ ಕೆಲವು ಸಂಗತಿಗಳನ್ನು ತಿಳಿಯಬಹುದು.

೧. ಜರ್ಮನಿಯಲ್ಲಿ ಸರ್ವಾಧಿಕಾರಿಯಾಗಿದ್ದ ಅಡಾಲ್ಫ್ ಹಿಟ್ಲರನ ಆಡಳಿತ ಕಾಲದಲ್ಲಿ(ಕ್ರಿಶ ೧೯೩೩-೧೯೪೫) ಬರ್ಲಿನ್ ನಗರದಲ್ಲಿ ೧೦-ಮೇ-೧೯೩೩ ರಂದು ಜರ್ಮನ್ ಸ್ಟೂಡೆಂಟ್ಸ್ ಯೂನಿಯನ್ ವತಿಯಿಂದ ಪುಸ್ತಕಗಳನ್ನು ಸುಡುವ ಕಾರ್ಯಾಚರಣೆ ನಡೆಯಿತು. ಜಗತ್ತಿನ ಜನಸಮುದಾಯದಲ್ಲಿ

ಆರ್ಯನ್ ಜನಾಂಗವೇ ಅತ್ಯುತ್ತಮವಾದುದು ಎಂಬ ನಾಜಿ ತತ್ವದಿಂದ ಪ್ರೇರಿತರಾಗಿದ್ದ ಜರ್ಮನ್ ಯುವಕರು ಯಹೂದಿ ಜನಾಂಗದವರು ರಚಿಸಿದ್ದ ಪುಸ್ತಕಗಳನ್ನು ಮತ್ತು ನಾಜಿ ತತ್ವದ ಜನಾಂಗೀಯ ಕ್ರೂರತನಕ್ಕೆ ವಿರುದ್ಧವಾದ ವಿಚಾರಗಳನ್ನೊಳಗೊಂಡ ಅನೇಕ ಬರಹಗಾರರ ಪುಸ್ತಕಗಳನ್ನು ಬೆಂಕಿಗೆ ಹಾಕಿ ಸುಟ್ಟರು. ಈ ಕಾರ್ಯಾಚರಣೆಯಲ್ಲಿ ಸುಟ್ಟು ಬೂದಿಯಾದ ಪುಸ್ತಕಗಳ ರಾಶಿಯಲ್ಲಿ ಸಮತಾವಾದಿ ಕಾರ್ಲ್ ಮಾರ್ಕ್ಸ್, ಭೌತ ವಿಜ್ಞಾನಿ ಐನ್ ಸ್ಟೀನ್, ಮನೋ ವಿಜ್ಞಾನಿ ಸಿಗ್ಮಂಡ್ ಫ್ರಾಯ್ಡ್, ಸಾಹಿತಿ ಬ್ರೆಕ್ಟ್ ಮುಂತಾದವರ ಪುಸ್ತಕಗಳು ಸೇರಿದ್ದವು.

೨. ಬ್ರೆಕ್ಟ್ ಅವರು ಪುಸ್ತಕ ದಹನ ಎಂಬ ಈ ಕವನವನ್ನು ಕ್ರಿಶ ೧೯೩೮ರಲ್ಲಿ ರಚಿಸಿದರು. ಈ ವೇಳೆಗಾಗಲೇ ಜರ್ಮನಿಯಲ್ಲಿ ಹಿಟ್ಲರನ ಜನಾಂಗೀಯ ದಾಳಿಯಲ್ಲಿ ಯಹೂದಿಗಳ ಮೇಲೆ ಹಲ್ಲೆ, ಕೊಲೆ, ಸುಲಿಗೆಗಳು ಹೆಚ್ಚಾಗಿದ್ದುದರಿಂದ ಯೆಹೂದಿಯಾದ ಬ್ರೆಕ್ಟ್ ತಮ್ಮ ಸೆರೆಯಾಗಬಹುದು ಎಂಬ ಆತಂಕದಿಂದ, ಬರ್ಲಿನ್ ನಗರವನ್ನು ತೊರೆದು ದೇಶಾಂತರವಾಸಿಯಾಗಿ ಆಸ್ಟ್ರಿಯಾ, ಫಿನ್ಲಾಂಡ್, ಸ್ವಿಟ್ಜರ್ ಲ್ಯಾಂಡ್, ಫ್ರಾನ್ಸ್ ಗಳಲ್ಲಿ ಕೆಲವು ವರುಶಗಳ ಕಾಲ ಇದ್ದು, ೧೯೪೧ರಲ್ಲಿ ಅಮೆರಿಕ ದೇಶಕ್ಕೆ ಬಂದು ನೆಲೆಸಿದರು. ಹಿಟ್ಲರ್‌ನ ಮರಣದ ನಂತರ, ಅಮೆರಿಕ ದೇಶದಿಂದ ಯುರೋಪಿಗೆ ೧೯೪೭ರಲ್ಲಿ ಹಿಂತಿರುಗಿ ಬಂದು, ಎರಡನೆಯ ಮಹಾಯುದ್ಧದ ನಂತರ ಪೂರ್ವ ಮತ್ತು ಪಶ್ಚಿಮ ಎಂದು ಇಬ್ಬಾಗಗೊಂಡಿದ್ದ ಜರ್ಮನ್ ದೇಶದ ಪೂರ್ವ ಜರ್ಮನಿಯ ಬರ್ಲಿನ್ ನಗರದಲ್ಲಿ ನೆಲೆಗೊಂಡು ೧೯೫೬ರಲ್ಲಿ ಮರಣ ಹೊಂದುವ ತನಕ ರಂಗ ಚಟುವಟಿಕೆಯಲ್ಲಿ ತೊಡಗಿದ್ದರು.

# ೬. ಚರಮಗೀತೆ

**ಅನುವಾದ: ಶಾ.ಬಾಲುರಾವ್**

ಹಾಗಾದರೆ ಅಂತಿಮ ಶಿಲಾಲೇಖ ಹೀಗಿರಲಿ
(ಆ ಮುರಿದ ಕಲ್ಲುತುಂಡು ಯಾರೂ ಓದುಗರಿಲ್ಲದ್ದು )

ಭೂಮಂಡಳ ಸಿಡಿಯಲಿದೆ
ಯಾರಿಗೆ ಅದು ಜನ್ಮವಿತ್ತಿದೆಯೊ
ಅವರೇ ಅದನ್ನು ನಾಶಮಾಡಲಿದ್ದಾರೆ

ಒಟ್ಟುಗೂಡಿ ಬದುಕುವ ಮಾರ್ಗವೆಂದು
ನಾವು ಕಂಡುಕೊಂಡದ್ದು
ಕೇವಲ ಬಂಡವಾಳಗಾರಿಕೆಯನ್ನು;

ಭೌತಶಾಸ್ತ್ರದ ಅನ್ವೇಷಣೆಯಲ್ಲಿ
ನಾವು ಕಂಡುಕೊಂಡದ್ದು
ಇನ್ನೂ ಹೆಚ್ಚೇ
ಅದೆಂದರೆ
ಒಟ್ಟುಗೂಡಿ ಸಾಯುವುದು.

**ಬಂಡವಾಳಗಾರಿಕೆಯ ಹಣಕಾಸಿನ ವಹಿವಾಟು ಮತ್ತು ವಿಜ್ಞಾನ ಹಾಗೂ ತಂತ್ರಜ್ಞಾನದಿಂದ ತಯಾರಿಸಿದ ಹತಾರಗಳಿಂದ ಜಗತ್ತಿನಲ್ಲಿ ಮಾನವ ಸಮುದಾಯದ ಬದುಕು ಹೇಗೆ ನಾಶಗೊಳ್ಳುತ್ತಿದೆ ಎಂಬುದನ್ನು ಈ ಕವನದಲ್ಲಿ ಹೇಳಲಾಗಿದೆ.**

ಚರಮ=ಕೊನೆಯ/ಕಡೆಯ; ಗೀತೆ=ಹಾಡು/ಪದ; ಚರಮಗೀತೆ=ವ್ಯಕ್ತಿಯು ಸಾವನ್ನಪ್ಪಿದಾಗ, ಶವಸಂಸ್ಕಾರದ ಸಮಯದಲ್ಲಿ ಆ ವ್ಯಕ್ತಿಯ ನಡೆನುಡಿಯನ್ನು ಗುಣಗಾನ ಮಾಡುತ್ತ, ವ್ಯಕ್ತಿಗೆ ಕಟ್ಟಕಡೆಯದಾಗಿ ವಿದಾಯವನ್ನು ಹೇಳುವ ಗೀತೆ; ಈ ಕವನದ ತಲೆಬರಹವಾಗಿ ಬಂದಿರುವ ಚರಮಗೀತೆ ಎಂಬ ನುಡಿಗಟ್ಟು ಇಡೀ ಮಾನವಸಮುದಾಯದ ಬದುಕಿನ ದುರಂತವನ್ನು ಸೂಚಿಸುವ ರೂಪಕವಾಗಿದೆ;

ಅಂತಿಮ=ಕಟ್ಟಕಡೆಯ/ಕೊನೆಯ; ಶಿಲಾ=ಕಲ್ಲು/ಬಂಡೆ/ಅರೆ; ಲೇಖ=ಬರಹ/ಬರವಣಿಗೆ; ಶಿಲಾಲೇಖ=ಕಲ್ಲಿನ ಚಪ್ಪಡಿ ಇಲ್ಲವೇ ಕಲ್ಲಿನ ಹಾಸಿನ ಮೇಲೆ ಕೆತ್ತಿರುವ ಅಕ್ಕರಗಳ ಬರಹರೂಪ/ಶಾಸನ;

ಹೀಗೆ+ಇರಲಿ; ಮುರಿ=ತುಂಡಾಗು; ತುಂಡು=ಚೂರು; ಮುರಿದ ಕಲ್ಲುತುಂಡು=ಮುರಿದು ತುಂಡಾಗಿರುವ ಕಲ್ಲುಚಪ್ಪಡಿ; ಓದುಗರು+ಇಲ್ಲದ್ದು;

**ಹಾಗಾದರೆ ಅಂತಿಮ ಗೀತೆ ಹೀಗಿರಲಿ. ಆ ಮುರಿದ ಕಲ್ಲು ತುಂಡು ಯಾರೂ ಓದುಗರಿಲ್ಲದ್ದು=ಓದುಗರ** ಗಮನಕ್ಕೆ ಬಾರದಂತೆ ಮುರಿದು ಬಿದ್ದಿರುವ ಕಲ್ಲು ಚಪ್ಪಡಿಯ ಮೇಲಿನ ಬರಹದ ಒಕ್ಕಣೆಯು ಈ ಕೆಳಕಂಡಂತೆ ಇರಲಿ.

ಪ್ರಾಚೀನ ಕಾಲದಿಂದಲೂ ಇಂದಿನವರೆಗೂ ಮಾನವ ಸಮುದಾಯದಲ್ಲಿ ಒಂದು ಆಚರಣೆಯಿದೆ. ಅದೇನೆಂದರೆ ಕಲ್ಲು ಬಂಡೆ ಇಲ್ಲವೇ ಕಲ್ಲು ಹಾಸಿನ ಮೇಲೆ ತಮ್ಮ ಬದುಕಿನ ಅನೇಕ ಸಂಗತಿಗಳನ್ನು ಅಕ್ಕರದ ರೂಪದಲ್ಲಿ ಕೆತ್ತಿ ಇತರರ ಗಮನಕ್ಕೆ ಮತ್ತು ಮುಂದಿನ ತಲೆಮಾರಿಗೆ ತಿಳಿಸಲಾಗುತ್ತದೆ. ಇದನ್ನು ಶಿಲಾಶಾಸನ/ಕಲ್ಲಿನ ಬರಹವೆಂದು ಕರೆಯುತ್ತಾರೆ;

ಮಂಡಳ=ಪ್ರಾಂತ್ಯ/ಪ್ರದೇಶ; ಭೂಮಂಡಳ=ಸೂರ್ಯಮಂಡಲದಲ್ಲಿ ದಿನಕ್ಕೊಮ್ಮೆ ತನ್ನ ನೆಲೆಯಲ್ಲಿ ತಾನು ತಿರುಗುತ್ತ, ವರುಶಕ್ಕೊಮ್ಮೆ ಸೂರ್ಯನ ಸುತ್ತಲೂ ತಿರುಗುತ್ತಿರುವ ಗುಂಡಾಗಿರುವ ಭೂಮಿಯೆಂಬ ಗ್ರಹ; ಸಿಡಿ=ಒಡೆದು ಚೂರುಚೂರಾಗು; ಜನ್ಮ+ಇತ್ತಿದೆಯೊ; ಜನ್ಮ=ಹುಟ್ಟು/ಜನನ; ಇತ್ತಿದೆಯೊ= ನೀಡಿದೆಯೊ/ಕೊಟ್ಟಿದೆಯೊ;

**ಭೂಮಂಡಳ ಸಿಡಿಯಲಿದೆ... ಯಾರಿಗೆ ಅದು ಜನ್ಮವಿತ್ತಿದೆಯೊ ಅವರೇ ಅದನ್ನು ನಾಶಮಾಡಲಿದ್ದಾರೆ**=ಭೂಮಂಡಲದಲ್ಲಿ ಕೋಟಿಗಟ್ಟಲೆ ಬಗೆಯ ಜೀವರಾಶಿಗಳು ಹುಟ್ಟುತ್ತಿವೆ; ಬಾಳುತ್ತಿವೆ; ಸಾಯುತ್ತಿವೆ. ಸಹಸ್ರಾರು ವರುಶಗಳಿಂದಲೂ ಜೀವಿಗಳ ಹುಟ್ಟು ಬದುಕು ಸಾವಿನ ಕ್ರಿಯೆಯು ನಿರಂತರವಾಗಿ ನಡೆಯುತ್ತಿದ್ದರೂ ಭೂಮಂಡಲ ನಾಶವಾಗಿಲ್ಲ. ಆದರೆ ಜೀವಿಗಳ ಸಮೂಹದಲ್ಲಿ ಮಾನವ ಜೀವಿಯು ಹುಟ್ಟಿದ ನಂತರ ಭೂಮಿಯ ನಾಶ ಆರಂಭವಾಗಿದೆ.

ಏಕೆಂದರೆ ಉಳಿದೆಲ್ಲ ಜೀವಿಗಳು ನಿಸರ್ಗದಲ್ಲಿ ತಮ್ಮ ಉಳಿವಿಗೆ ಬೇಕಾದುದನ್ನು ಮಾತ್ರ ಪಡೆದು, ನಿಸರ್ಗವನ್ನು ಹಾಳು ಮಾಡದೆ, ನಿಸರ್ಗದೊಡನೆ ಒಂದಾಗಿ ಬಾಳಿ ಅಳಿದರೆ, ಮಾನವ ಜೀವಿಗಳು ಮಾತ್ರ ತಮ್ಮ ಉಳಿವಿಗೆ ಅಗತ್ಯವಾದುದಕ್ಕಿಂತ ಹೆಚ್ಚಿನದನ್ನು ಪಡೆಯುವುದಕ್ಕಾಗಿ ನಿಸರ್ಗವನ್ನೇ ಕೊಚ್ಚಿ ಕೆಡುಹಿ ವಿರೂಪಗೊಳಿಸುತ್ತ, ಅದರ ಅಳಿವಿನ ಜತೆಜತೆಯಲ್ಲಿಯೇ ತಮ್ಮ ಅಳಿವನ್ನು ಹಾಗೂ ಭೂಮಂಡಲದ ಸಕಲ ವಸ್ತು ಮತ್ತು ಜೀವಿಗಳನ್ನು ನಾಶಗೊಳಿಸುತ್ತಿದ್ದಾರೆ. ತಮ್ಮ ಹುಟ್ಟಿಗೆ ನೆಲೆಯಾದ, ಬದುಕಿಗೆ ಆಕರವಾದ ಭೂಮಂಡಲವನ್ನೇ ಇಲ್ಲವಾಗಿಸುತ್ತಿದ್ದಾರೆ.

ಒಟ್ಟುಗೂಡಿ=ಜತೆ ಸೇರಿ; ಮಾರ್ಗ+ಎಂದು; ಮಾರ್ಗ=ದಾರಿ/ಹಾದಿ; ಬಂಡವಾಳ=ಹಣ ಒಡವೆ ವಸ್ತು ಆಸ್ತಿಯನ್ನು ದೊಡ್ಡ ಪ್ರಮಾಣದಲ್ಲಿ ಹೊಂದಿರುವುದು; ಬಂಡವಾಳಗಾರಿಕೆ=ಇದೊಂದು ನುಡಿಗಟ್ಟು. ದೊಡ್ಡ ಮೊತ್ತದ ಬಂಡವಾಳವನ್ನು ತೊಡಗಿಸಿ ಮಾಡುವ ವ್ಯವಹಾರಗಳನ್ನು ಇದು ಸೂಚಿಸುತ್ತದೆ.

ಒಂದು ದೇಶದ ವ್ಯವಸಾಯ, ವಿದ್ಯೆ, ಆರೋಗ್ಯ, ಕೈಗಾರಿಕೆ, ವ್ಯಾಪಾರ ಮತ್ತು ಇತರ ಎಲ್ಲ ರಂಗಗಳಲ್ಲಿಯೂ ಸಂಪತ್ತುಳ್ಳ ಕೆಲವೇ ವ್ಯಕ್ತಿಗಳು ತಮ್ಮ ಬಳಿಯಿರುವ ಹಣವನ್ನು ದೊಡ್ಡ ಪ್ರಮಾಣದಲ್ಲಿ ತೊಡಗಿಸಿ, ದೇಶದ ಆಡಳಿತದ ರೀತಿನೀತಿ ಗಳನ್ನೇ ತಮ್ಮ ನಿಯಂತ್ರಣದಲ್ಲಿರಿಸಿಕೊಂಡು ದೇಶದ ಶಾಸಕಾಂಗ, ಕಾರ್ಯಾಂಗ ಮತ್ತು ನ್ಯಾಯಾಂಗದ ಒಕ್ಕೂಟಗಳು ತಮ್ಮ ನಿಲುವಿಗೆ ತಕ್ಕಂತೆ ಶಾಸನಗಳನ್ನು ಮತ್ತು ಕೆಲಸಗಳನ್ನು ಮಾಡುವಂತೆ ನಿರ್ದೇಶಿಸುತ್ತಾರೆ; ಇದರಿಂದಾಗಿ ದೇಶದಲ್ಲಿ ಬೆರಳೆಣಿಕೆಯ ಬಂಡವಾಳಶಾಹಿಗಳ ಮತ್ತು ಕೋಟಿಗಟ್ಟಲೆ ದುಡಿಯುವ ಶ್ರಮಜೀವಿಗಳ ವರ್ಗ ರೂಪುಗೊಂಡು ಬಡವ ಬಲ್ಲಿದರ ನಡುವಣ ಅಂತರ ಹೆಚ್ಚಾಗುತ್ತದೆ. ದುಡಿಯುವ ವರ್ಗದ ಜನರು ಜೀವನಕ್ಕೆ ಅಗತ್ಯವಾದ ಅನ್ನ, ಬಟ್ಟೆ, ವಸತಿ, ವಿದ್ಯೆ, ಆರೋಗ್ಯವನ್ನು ಸಾಕಷ್ಟು ಪ್ರಮಾಣದಲ್ಲಿ ಪಡೆಯಲಾಗದೆ ಬಡತನದ ಮತ್ತು ಅರೆಕೊರೆಯ ಜೀವನವನ್ನು ನಡೆಸುತ್ತಿದ್ದರೆ, ಬಂಡವಾಳಶಾಹಿಗಳ

ಸಂಪತ್ತಿನ ಪ್ರಮಾಣ ದಿನೇ ದಿನೇ ಇಮ್ಮಡಿಗೊಂಡು ಸಾವಿರಾರು ಪಟ್ಟು ಹೆಚ್ಚಾಗುತ್ತಿರುತ್ತದೆ.

ಭೂಮಂಡಲದಲ್ಲಿರುವ ಹೊಲಗದ್ದೆತೋಟ, ಕಾಡುಮೇಡು ಕಡಲಿನ ಸಂಪತ್ತು ಹಾಗೂ ಕೋಟಿಗಟ್ಟಲೆ ದುಡಿಯುವ ಶ್ರಮಜೀವಿಗಳಿಂದ ನಿರಂತರವಾಗಿ ಉತ್ಪನ್ನ ಗೊಳ್ಳುತ್ತಿರುವ ದವಸಧಾನ್ಯ ಮತ್ತು ಇತರ ಎಲ್ಲ ಬಗೆಯ ವಸ್ತುಗಳು ಜಗತ್ತಿನ ಮಾನವ ಸಮುದಾಯಕ್ಕೆ ಸಮಪ್ರಮಾಣದಲ್ಲಿ ವಿತರಣೆಗೊಳ್ಳುವ ವ್ಯವಸ್ಥೆಯು ಬಂದಾಗ ಮಾತ್ರ ಮಾನವ ಸಮುದಾಯದಲ್ಲಿ ಪ್ರತಿಯೊಬ್ಬರು ಜೀವನಕ್ಕೆ ಅಗತ್ಯ ವಾದುದನ್ನು ಪಡೆಯಲು ಅವಕಾಶವಾಗುತ್ತದೆ. ಆದರೆ ಈಗ ಜಗತ್ತಿನ ಬಹುತೇಕ ದೇಶಗಳಲ್ಲಿ ಬಂಡವಾಳಗಾರಿಕೆಯ ವಹಿವಾಟು ಇರುವುದರಿಂದ, ಜಗತ್ತಿನ ಜನಸಮುದಾಯದಲ್ಲಿ ಶೇ.೪೦ಕ್ಕಿಂತ ಹೆಚ್ಚಿನ ಮಂದಿ ಹಸಿವು, ಬಡತನ ಮತ್ತು ಅಪಮಾನದ ಬದುಕಿನಲ್ಲಿಯೇ ನರಳುತ್ತಿದ್ದಾರೆ;

**ಒಟ್ಟುಗೂಡಿ ಬದುಕುವ ಮಾರ್ಗವೆಂದು ನಾವು ಕಂಡುಕೊಂಡದ್ದು ಕೇವಲ ಬಂಡವಾಳಗಾರಿಕೆಯನ್ನು**=ಪ್ರತಿಯೊಬ್ಬ ಮಾನವ ಜೀವಿಯು ನಿಸರ್ಗದಲ್ಲಿ ಹುಟ್ಟಿ ಬಂದಿದ್ದಾನೆಯೇ ಹೊರತು, ನಿಸರ್ಗದ ಒಡೆಯನಾಗಿ ಹುಟ್ಟಿಬಂದಿಲ್ಲ. ಆದರೆ ಮಾನವರಾದ ನಾವೇ ರೂಪಿಸಿಕೊಂಡಿರುವ ಬಂಡವಾಳಗಾರಿಕೆಯ ಸಂಪತ್ತಿನ ವ್ಯವಸ್ಥೆಯಿಂದಾಗಿ, ಕೆಲವರು ಮಾತ್ರ ಹುಟ್ಟುವಾಗಲೇ ಭೂಮಂಡಲದ ಸಂಪತ್ತಿಗೆ ಒಡೆಯರಾಗಿರುತ್ತಾರೆ. ಬಂಡವಾಳಗಾರಿಕೆಯ ವಹಿವಾಟು ಇರುವ ತನಕ ಜಗತ್ತಿನಲ್ಲಿ ಮಾನವ ಸಮುದಾಯವು ನೆಮ್ಮದಿಯಿಂದ ಬಾಳುವುದಕ್ಕೆ ಆಗುವುದಿಲ್ಲ.

**ಭೌತಶಾಸ್ತ್ರ**=ನಿಸರ್ಗದಲ್ಲಿರುವ ಜಡವಸ್ತುಗಳ ಮತ್ತು ಜೀವಿಗಳ ಶಕ್ತಿ ಹಾಗೂ ಬಲದ ನಂಟಿನ ಸಂಗತಿಗಳನ್ನು, ಗಾಳಿ ಬೆಳಕು ಬೆಂಕಿಯ ಮೂಲದ ಸ್ವರೂಪವನ್ನು ಅಧ್ಯಯನ ಮಾಡುವ ವಿಜ್ಞಾನ. ಅನ್ವೇಷಣೆ=ಹುಡುಕಾಟ/ತಿಳಿಯದಿರುವುದನ್ನು ತಿಳಿದುಕೊಳ್ಳಲು ಮಾಡುವ ಪ್ರಯತ್ನ;

**ಭೌತಶಾಸ್ತ್ರದ ಅನ್ವೇಷಣೆ**=ಜಗತ್ತು ರೂಪುಗೊಳ್ಳಲು ಕಾರಣವಾಗಿರುವ ಅಣು ಮತ್ತು ಪರಮಾಣುಗಳೆಲ್ಲವನ್ನೂ ಬಿಡಿಬಿಡಿಯಾಗಿ ಒರೆಹಚ್ಚಿ ನೋಡುತ್ತ, ಕಟ್ಟಕಡೆಗೆ ಅಣುಬಾಂಬನ್ನು ತಯಾರಿಸುವ ಮಟ್ಟಕ್ಕೂ ಭೌತವಿಜ್ಞಾನ ತಲುಪಿದೆ;

**ಭೌತಶಾಸ್ತ್ರದ ಅನ್ವೇಷಣೆಯಲ್ಲಿ ನಾವು ಕಂಡುಕೊಂಡದ್ದು ಇನ್ನೂ ಹೆಚ್ಚೇ ಅದೆಂದರೆ ಒಟ್ಟುಗೂಡಿ ಸಾಯುವುದು**=ಭೌತಶಾಸ್ತ್ರದ ಹುಡುಕಾಟದಿಂದ ಮಾನವನೇ ತಯಾರಿಸಿದ ಅಣುಬಾಂಬು ಮತ್ತು ಇತರ ಹತಾರಗಳಿಂದ ಇಡೀ

ಮಾನವ ಸಮುದಾಯವೇ ಕೊನೆಗೊಳ್ಳುವ ಹಂತವನ್ನು ತಲುಪಿದೆಯೇ ಹೊರತು, ಜಾತಿ/ಮತ/ಜನಾಂಗದ ಹಗೆತನವನ್ನು ತೊರೆದು ಎಲ್ಲ ದೇಶಗಳ ಜನರು ಜತೆಗೂಡಿ, ಜೀವನಕ್ಕೆ ಅಗತ್ಯವಾದ ಅನ್ನ ಬಟ್ಟೆ ವಸತಿ ವಿದ್ಯೆ ಉದ್ಯೋಗ ಆರೋಗ್ಯವನ್ನು ಪಡೆದು, ಒಲವು ನಲಿವು ನೆಮ್ಮದಿಯಿಂದ ಬಾಳುವುದನ್ನು ಮಾನವ ಸಮುದಾಯ ಕಲಿಯಲಿಲ್ಲ ಎಂಬ ಹತಾಶೆಯ ದನಿಯು ಈ ಕವನದಲ್ಲಿ ಕೇಳಿಬರುತ್ತಿದೆ.



# ೭. ಜರ್ಮನಿ ೧೯೪೫

**ಅನುವಾದ: ಶಾ.ಬಾಲುರಾವ್**

ಮನೆಯೊಳಗೆ ಮಹಾಮಾರಿ
ಹೊರಗೆ ಥಂಡಿಯ ಸಾವು
ನಾವೆಲ್ಲಿ ಹೋಗಬೇಕೀಗ.

ಹೆಣ್ಣು ಹಂದಿ ಹುಲ್ಲ ಮೇಲೆಯೇ ಮಾಡಿಕೊಂಡಿದೆ
ಆ ಹೆಣ್ಣು ಹಂದಿ ನನ್ನ ತಾಯಿ

ಎಲೆ ನನ್ನವ್ವ... ಎಲೆ ಹೆತ್ತವ್ವ
ನೀನೇನು ಮಾಡಿಬಿಟ್ಟೆ.

**ತಾವು ಹುಟ್ಟಿ ಬೆಳೆದು ಬಾಳುತ್ತಿರುವ ನಾಡಿನಲ್ಲಿಯೇ ಜನಾಂಗದ ಹೆಸರಿನಲ್ಲಿ ನಡೆಯುತ್ತಿರುವ ಕೊಲೆ, ಸುಲಿಗೆ ಮತ್ತು ಹಲ್ಲೆಗೆ ಗುರಿಯಾಗಿ ನರಳುತ್ತಿರುವ ಜನಸಮುದಾಯದ ಬದುಕಿನ ದುರಂತವನ್ನು ಈ ಕವನದಲ್ಲಿ ರೂಪಕದ ಮೂಲಕ ಚಿತ್ರಿಸಲಾಗಿದೆ.**

**ಜರ್ಮನಿ**=ಯುರೋಪ್ ಪ್ರಾಂತ್ಯದಲ್ಲಿರುವ ಒಂದು ದೇಶ. ೧೯೩೩ ರಿಂದ ೧೯೪೫ರ ವರೆಗೆ ಈ ದೇಶವನ್ನು ಆಳುತ್ತಿದ್ದ ಅಡಾಲ್ಫ್ ಹಿಟ್ಲರ್ ಎಂಬ ವ್ಯಕ್ತಿಯು ಒಬ್ಬ ಸರ್ವಾಧಿಕಾರಿಯಾಗಿದ್ದ. ಜಗತ್ತಿನ ಮಾನವ ಸಮುದಾಯದಲ್ಲಿ ಆರ್ಯ ಜನಾಂಗದವರೇ ಅತ್ಯುತ್ತಮರೆಂದು ಸಾರುತ್ತ, ಇತರ ಜನಾಂಗಗಳನ್ನು

ಕಡೆಗಣಿಸಿದ್ದ ಹಿಟ್ಲರನು ಜರ್ಮನ್ ಪ್ರಜೆಗಳಾಗಿದ್ದ ಯಹೂದಿ ಜನಾಂಗದವರನ್ನು ಸಂಪೂರ್ಣವಾಗಿ ನಾಶಮಾಡಲೆಂದು ನಾಜಿ ಎಂಬ ಹೆಸರಿನ ಪಾರ್ಟಿಯನ್ನು ರಚಿಸಿ (ನ್ಯಾಶನಲ್ ಸೋಶಿಯಲಿಸ್ಟ್ ಪಾರ್ಟಿ ಆಫ್ ಜರ್ಮನಿ) ಸರಿಸುಮಾರು ೬೦ ಲಕ್ಷಕ್ಕಿಂತ ಹೆಚ್ಚು ಮಂದಿ ಯಹೂದಿಗಳನ್ನು ಅತ್ಯಂತ ಕ್ರೂರವಾಗಿ ಕೊಲ್ಲಿಸಿದ. ೧೯೪೫ ರ ಕಾಲಮಾನದಲ್ಲಿ ಜರ್ಮನಿಯಲ್ಲಿದ್ದ ಯಹೂದಿ ಜನಾಂಗದವರ ಬದುಕು ದುರಂತಮಯವಾಗಿತ್ತು;

ಮಹಾ=ದೊಡ್ಡ; ಮಾರಿ=ಒಬ್ಬ ದೇವತೆಯ ಹೆಸರು. ಮಹಾಮಾರಿ= ಇದೊಂದು ನುಡಿಗಟ್ಟು. ಜನರಿಗೆ ಸಾವುನೋವನ್ನುಂಟುಮಾಡುವ ದೇವತೆಯೆಂಬ ತಿರುಳಿನಲ್ಲಿ ಬಳಕೆಯಾಗುತ್ತದೆ;

**ಮನೆಯೊಳಗೆ ಮಹಾಮಾರಿ**=ಮನೆಯೊಳಗೆ ಎಂದರೆ ಜರ್ಮನಿ ದೇಶದೊಳಗೆ, ಮಹಾಮಾರಿ ಎಂದರೆ ದೊಡ್ಡ ಪ್ರಮಾಣದಲ್ಲಿ ಯಹೂದಿ ಜನಾಂಗದವರ ಮೇಲೆ ನಡೆಯುತ್ತಿದ್ದ ಹಿಂಸಾಚಾರ.

ಆರ್ಯ ಜನಾಂಗದವರ ಸೇಡಿನ ಬೆಂಕಿಗೆ ಗುರಿಯಾದ ಯಹೂದಿಗಳು ತಮ್ಮ ಮನೆಮಠಗಳನ್ನು ಕಳೆದುಕೊಂಡು ಹಸಿವು ಮತ್ತು ಅಪಮಾನದಿಂದ ನರಳುವಂತಾಯಿತು. ಯಾವ ಗಳಿಗೆಯಲ್ಲಾದರೂ ಮಾನಹಾನಿ ಮತ್ತು ಜೀವಹಾನಿಗೆ ಒಳಗಾಗಿ ಸಂಕಟದಿಂದ ನರಳುವಂತಹ ಗತಿಯು ಒದಗಿಬಂದಿತು. ಜರ್ಮನಿ ದೇಶದಲ್ಲಿಯೇ ಹುಟ್ಟಿ ಬೆಳೆದು ಬಾಳುತ್ತಿದ್ದ ಯಹೂದಿಗಳಿಗೆ ತಮ್ಮ ತಾಯ್ನಾಡಿನಲ್ಲಿಯೇ ತಲೆಯೆತ್ತಿ ಬಾಳಲಾರದಂತಹ ದುರ್ಗತಿ ಒದಗಿ ಬಂದಿರುವುದನ್ನು ಮನೆಯೊಳಗೆ ಮಹಾಮಾರಿ ಎಂಬ ರೂಪಕದ ನುಡಿಗಳು ಸೂಚಿಸುತ್ತಿವೆ.

ಹೊರಗೆ=ಜರ್ಮನಿಯ ಹೊರಗಿನ ದೇಶಗಳಲ್ಲಿ;

೧೯೩೯ ರಿಂದ ೧೯೪೫ರ ಕಾಲಮಾನದಲ್ಲಿ ಯುರೋಪ್ ಮತ್ತು ಏಶ್ಯಾ ಪ್ರಾಂತ್ಯಗಳಲ್ಲಿ ಎರಡನೆಯ ಮಹಾಯುದ್ಧ ನಡೆಯುತ್ತಿದೆ. ಫ್ರಾನ್ಸ್–ಇಂಗ್ಲೆಂಡ್–ಅಮೆರಿಕ–ರಶ್ಯ ದೇಶಗಳ ಸೇನೆಗಳು ಒಗ್ಗೂಡಿ ಜರ್ಮನಿ–ಜಪಾನ್–ಇಟಲಿ ದೇಶಗಳ ಸೇನೆಗಳ ಎದುರು ಹೋರಾಡುತ್ತಿದ್ದವು.

ಥಂಡಿ=ತಂಡಿ/ಚಳಿ/ತಣ್ಣಗಿರುವುದು; ಥಂಡಿಯ ಸಾವು=ಈ ನುಡಿಗಳು ರೂಪಕದ ತಿರುಳಿನಲ್ಲಿ ಬಳಕೆಗೊಂಡಿವೆ.

**ಹೊರಗೆ ಥಂಡಿಯ ಸಾವು**=ಎರಡನೆಯ ಮಹಾಯುದ್ಧ ನಡೆದ ಆರು ವರುಶಗಳ ಕಾಲದಲ್ಲಿ ಆರು ಕೋಟಿಗೂ ಹೆಚ್ಚು ಮಂದಿ ಸಾವಿಗೆ ಬಲಿಯಾದರೆ, ಕೋಟ್ಯಂತರ ಮಂದಿ ಹಸಿವು, ಅಪಮಾನ ಮತ್ತು ಬಡತನದ ಸಂಕಟಕ್ಕೆ ಗುರಿಯಾಗಿ ಬಹುಕಾಲ ನರಳುವಂತಾಯಿತು. **'ಥಂಡಿಯ ಸಾವು'** ಎಂಬ ರೂಪಕವು ಕಾಳೆಗದಲ್ಲಿ ತೊಡಗಿದ್ದ ಎರಡು ಕಡೆಯ ಸೇನೆಯು ಅತ್ಯಂತ ಕ್ರೂರವಾದ ರೀತಿಯಲ್ಲಿ ಕೊಲೆ, ಸುಲಿಗೆಯಲ್ಲಿ ತೊಡಗಿ ಲಕ್ಷಾಂತರ ಮಹಿಳೆಯರ ಮೇಲೆ ಅತ್ಯಾಚಾರ ನಡೆಸಿ, ಮಕ್ಕಳನ್ನು ಬಿಡದೆ ಕಗ್ಗೊಲೆ ಮಾಡಿದ್ದನ್ನು ಸೂಚಿಸುತ್ತದೆ; ಮಾನವರ ಕರುಣೆಯಿಲ್ಲದ ಇಂತಹ ವರ್ತನೆಯನ್ನು ತಣ್ಣನೆಯ ಕ್ರೂರತನ ಎಂದು ಕರೆಯುತ್ತಾರೆ;

ನಾವು+ಎಲ್ಲಿ; ಎಲ್ಲಿ=ಯಾವ ದೇಶಕ್ಕೆ/ಯಾವ ಪ್ರಾಂತ್ಯಕ್ಕೆ;

ಹೋಗಬೇಕು+ಈಗ;

**ನಾವೆಲ್ಲಿ ಹೋಗಬೇಕೀಗ**=ತಾಯ್ನಾಡು ಜರ್ಮನಿಯಲ್ಲಿ ನಾಜಿ ತಂಡದ ಕ್ರೂರತನಕ್ಕೆ ಬಲಿಯಾಗುತ್ತಿದ್ದೇವೆ... ಹೊರದೇಶಗಳಲ್ಲಿ ಎದೆ ನಡುಗಿಸುವಂತಹ ಕಾಳೆಗ ನಡೆಯುತ್ತಿದೆ. ಯಹೂದಿಗಳಾದ ನಾವು ಈಗ ಬದುಕಿ ಉಳಿಯಲು ಜಗತ್ತಿನಲ್ಲಿ ನೆಲೆಯೇ ಇಲ್ಲವಾಗಿದೆ;

ಮಾಡಿಕೊಂಡಿದೆ=ಮಲಮೂತ್ರವನ್ನು ವಿಸರ್ಜನೆ ಮಾಡಿಕೊಂಡಿದೆ; ಹೆಣ್ಣುಹಂದಿ=ಜರ್ಮನಿ ದೇಶ. ರೂಪಕದ ತಿರುಳು; ನನ್ನ ತಾಯಿ=ತಾಯ್ನಾಡು;

**ಹೆಣ್ಣುಹಂದಿ ಹುಲ್ಲ ಮೇಲೆಯೇ ಮಾಡಿ ಕೊಂಡಿದೆ... ಆ ಹೆಣ್ಣು ಹಂದಿ ನನ್ನ ತಾಯಿ=** ಈ ನುಡಿಗಳೆಲ್ಲವೂ ರೂಪಕವಾಗಿ ಬಳಕೆಗೊಂಡಿವೆ. ಹೆಣ್ಣುಹಂದಿಯು ತನ್ನ ನೆಲೆಯನ್ನು ಕೊಳಕು ಮಾಡಿ, ಮರಿಗಳಾಗಲಿ ಇಲ್ಲವೇ ತಾನಾಗಲಿ ನೆಮ್ಮದಿಯಿಂದಿರಲು ಆಗದಂತಹ ಕೆಲಸವನ್ನು ಮಾಡಿದೆ. ಅಂತೆಯೇ ಜರ್ಮನಿಯನ್ನು ಆಳುತ್ತಿದ್ದ ಹಿಟ್ಲರನು ಇಡೀ ದೇಶವನ್ನು ಹಗೆತನ ಮತ್ತು ಸೇಡಿನ ನೆಲೆಯನ್ನಾಗಿ ಮಾಡಿ, ಪ್ರಜೆಗಳಾಗಲಿ ಇಲ್ಲವೇ ತಾನಾಗಲಿ ನೆಮ್ಮದಿಯಿಂದ ಬಾಳುವುದಕ್ಕೆ ಆಗದಂತಹ ಪರಿಸರವನ್ನು ನಿರ್ಮಿಸಿದ್ದಾನೆ. ಇಡೀ ದೇಶವೇ ಒಳಗಿನ ಮತ್ತು ಹೊರಗಿನ ಕ್ರೂರತನಕ್ಕೆ ಬಲಿಯಾಗುತ್ತಿದೆ. ಹೆತ್ತ ತಾಯಿ ತನ್ನ ಮಕ್ಕಳಿಗೆ ಹಾಲುಣಿಸುವ ಬದಲು ವಿಷವನ್ನು ಉಣಿಸಿದಂತೆ ಜರ್ಮನಿಯನ್ನು ಆಳುತ್ತಿದ್ದ ಹಿಟ್ಲರನು ಯೆಹೂದಿ ಜನಸಮುದಾಯವನ್ನು ಸೆರೆ ಹಿಡಿದು, ಗುಂಪುಗುಂಪಾಗಿ ನಿಲ್ಲಿಸಿ ಗುಂಡಿಕ್ಕಿ ಕೊಲ್ಲುವ, ನಂಜನ್ನು ಉಣಿಸುವ ಮತ್ತು ಗ್ಯಾಸ್

ಚೇಂಬರ್‌ಗಳಲ್ಲಿ ನಂಜಿನ ಅನಿಲವನ್ನು ಬಿಟ್ಟು ಉಸಿರನ್ನು ಅಡಗಿಸಿ ಸಾಮೂಹಿಕವಾಗಿ ಕೊಲ್ಲುವ ಕೆಲಸದಲ್ಲಿ ತೊಡಗಿದ್ದಾನೆ.

**ಎಲೆ ನನ್ನವ್ವ ಎಲೆ ಹೆತ್ತವ್ವ ನೀನೇನು ಮಾಡಿಬಿಟ್ಟೆ**= ತಾಯ್ನಾಡಿನಲ್ಲಿಯೇ ತಾವು ದುರಂತಕ್ಕೆ ಬಲಿಯಾಗತೊಡಗಿದಾಗ, ದಿಕ್ಕು ತೋಚದಂತಾಗಿ ಯೆಹೂದಿ ಜನಾಂಗದವರು ಆಕ್ರಂದನ ದನಿಯಿಂದ ನರಳುತ್ತಿರುವುದನ್ನು ಈ ನುಡಿಗಳು ಸೂಚಿಸುತ್ತಿವೆ;

**ಜರ್ಮನಿ ೧೯೪೫ ಕವನದ ಓದಿನ ಜತೆಗೆ ಇನ್ನು ಕೆಲವು ಸಂಗತಿಗಳನ್ನು ತಿಳಿಯಬೇಕಾದ ಅಗತ್ಯವಿದೆ.**

೧೯೩೯ ರಿಂದ ೧೯೪೫ ರ ವರೆಗೆ ಹಿಟ್ಲರನ ಆಡಳಿತದ ಸಮಯದಲ್ಲಿ ಸಾವು ನೋವಿಗೆ ಗುರಿಯಾಗಿ ನರಳಿದ್ದ ಯಹೂದಿ ಜನಾಂಗದವರಿಗೆ ಬ್ರಿಟಿಶರು ತಮ್ಮ ವಸಾಹತು ಆಗಿದ್ದ ಅರಬ್ಬರ ಪ್ಯಾಲೆಸ್ಟೈನ್ ಪ್ರದೇಶವನ್ನು ನೀಡಿ, ಜಗತ್ತಿನ ಬೇರೆ ಬೇರೆ ದೇಶಗಳಲ್ಲಿ ನೆಲೆಸಿದ್ದ ಯಹೂದಿಗಳಿಗೆ ಒಂದು ನೆಲೆಯನ್ನು ಕಲ್ಪಿಸಿದರು. ೧೯೪೮ ರಿಂದ ಯಹೂದಿಗಳ ಈ ನೆಲೆಯು ಇಸ್ರೇಲ್ ಎಂಬ ದೇಶವಾಗಿ ರೂಪುಗೊಂಡಿತು.

ಪ್ಯಾಲೆಸ್ಟೈನ್ ಅನ್ನು ತಮ್ಮ ತಾಯ್ನಾಡನ್ನಾಗಿ ಹೊಂದಿದ್ದ ಅರಬ್ ಜನಾಂಗ ದವರು ಮತ್ತು ಅಲ್ಲಿ ಹೊಸದಾಗಿ ಹೋಗಿ ನೆಲೆಸಿದ ಯಹೂದಿಗಳು ೧೯೪೮ ರಿಂದ ಇಂದಿನ ತನಕ ಒಂದಲ್ಲ ಒಂದು ಕಾರಣಕ್ಕಾಗಿ ಕಾದಾಡುತ್ತಲೇ ಇದ್ದಾರೆ. ಹೊಸ ಹೊಸ ಶಸ್ತ್ರಾಸ್ತ್ರಗಳನ್ನುಳ್ಳ ಯಹೂದಿಗಳು ಅರಬ್ಬರ ಮೇಲೆ ದಾಳಿಯನ್ನು ನಡೆಸುತ್ತ, ದೊಡ್ಡ ಪ್ರಮಾಣದಲ್ಲಿ ಅರಬ್ಬರ ಸಾವು ನೋವುಗಳಿಗೆ ಕಾರಣ ರಾಗಿದ್ದಾರೆ. ಇಂದು ತಮ್ಮ ತಾಯ್ನಾಡಿನಲ್ಲಿ ನೆಲೆಸಿರುವ ಅರಬ್ಬರ ಮೇಲೆ ಅಂದು ಆರ್ಯನ್ ಜನಾಂಗದ ಹಿಟ್ಲರನಿಂದ ಹಲ್ಲೆಗೊಳಗಾಗಿ ನರಳಿದ್ದ ಯಹೂದಿಗಳೇ ಕ್ರೂರವಾದ ಹಲ್ಲೆಯನ್ನು ಮಾಡುತ್ತಿದ್ದಾರೆ.

ಇದರಿಂದ ಒಂದು ವಾಸ್ತವದ ಸಂಗತಿಯು ನಮಗೆ ತಿಳಿಯುತ್ತದೆ. ಅದೇನೆಂದರೆ ಮಾನವರು ಅವರು ಯಾವುದೇ ಧರ್ಮದವರಾಗಿರಲಿ ಇಲ್ಲವೇ ಜನಾಂಗದವರಾಗಿರಲಿ ತಮ್ಮ ಬಳಿ ಶಕ್ತಿಯಿದ್ದಾಗ ಕ್ರೂರತನದಿಂದ ಬಲಹೀನರನ್ನು ತುಳಿಯುತ್ತಾರೆ. ತಾವು ಬಲಹೀನರಾಗಿದ್ದಾಗ ಅಸಹಾಯಕರಾಗಿ ನರಳುತ್ತಾರೆ. ಸನ್ನಿವೇಶಕ್ಕೆ ತಕ್ಕಂತೆ ಮಾನವ ಕ್ರೂರಪ್ರಾಣಿಯಾಗುತ್ತಾನೆ ಇಲ್ಲವೇ ಬಲಿಪಶುವಾಗುತ್ತಾನೆ.



# ೮. ಚಹ ಮಾಡುತ್ತ ದಿನಪತ್ರಿಕೆ ಓದುವುದು

**ಅನುವಾದ: ಶಾ.ಬಾಲುರಾವ್**

ಮುಂಜಾನೆ ದಿನಪತ್ರಿಕೆಯಲ್ಲಿ
ದೊರೆಗಳ ಧರ್ಮಗುರುಗಳ
ಬ್ಯಾಂಕರುಗಳ ಎಣ್ಣೆದಣಿಗಳ
ಯುಗಪ್ರವರ್ತಕ ಯೋಜನೆಗಳನ್ನು
ಕುರಿತು ಓದುತ್ತೇನೆ

ಇನ್ನೊಂದು ಕಣ್ಣು ಚಹದ ಪಾತ್ರೆಯ ಮೇಲಿದೆ
ನೀರು ಆವಿಯಾಡುತ್ತದೆ
ಗುಳುಗುಳು ಗುಳ್ಳೆಗಳೇಳುತ್ತವೆ
ಮತ್ತೆ ತಿಳಿಗೊಳ್ಳುತ್ತದೆ
ನಂತರ ಮೇಲುಕ್ಕಿ ಹರಿದು
ಬೆಂಕಿ ತಣ್ಣಗಾಗುತ್ತದೆ.

**ಆಡಳಿತ, ಧರ್ಮ ಮತ್ತು ಸಂಪತ್ತಿನ ಗದ್ದುಗೆಯಲ್ಲಿ ಕುಳಿತಿರುವವರು ರೂಪಿಸುವ ಯೋಜನೆಗಳೆಲ್ಲವೂ ಅವರವರ ಹಿತವನ್ನು ಕಾಪಾಡುತ್ತವೆಯೇ ಹೊರತು, ನಾಡಿನ ಜನಸಮುದಾಯಕ್ಕೆ ಒಳಿತನ್ನು ಮಾಡುವುದಿಲ್ಲವೆಂಬ ಸಂಗತಿಯನ್ನು ಈ ಕವನದಲ್ಲಿ ಹೇಳಲಾಗಿದೆ.**

ಮುಂಜಾನೆ=ಬೆಳಗ್ಗೆ; ದೊರೆ=ರಾಜ/ನಾಡಿನ ಆಡಳಿತದ ಗದ್ದುಗೆಯಲ್ಲಿರುವ ವ್ಯಕ್ತಿ; ಧರ್ಮಗುರು=ಜಗತ್ತಿನ ಜನಸಮುದಾಯದಲ್ಲಿರುವ ಬಹುಬಗೆಯ ಧರ್ಮ ಗಳಲ್ಲಿ, ಒಂದೊಂದು ಧರ್ಮಕ್ಕೂ ಒಬ್ಬೊಬ್ಬ ಗುರು ಇರುತ್ತಾರೆ; ಬ್ಯಾಂಕರ್=ಜನರ ಬಹುಬಗೆಯ ವ್ಯವಹಾರಗಳಿಗೆ ಹಣವನ್ನು ಬಡ್ಡಿಗೆ ನೀಡುವವನು ಮತ್ತು ಗ್ರಾಹಕರ ಹಣಕಾಸಿನ ವ್ಯವಹಾರಗಳನ್ನು ನೋಡಿಕೊಳ್ಳುವವನು; ಎಣ್ಣೆದಣಿ= ಪೆಟ್ರೋಲಿಯಮ್ ಉತ್ಪನ್ನಗಳಿಗೆ ಒಡೆಯನಾಗಿರುವವನು; ಯುಗ=ಹೆಚ್ಚಿನ ಕಾಲ; ಪ್ರವರ್ತಕ=ಕೆಲಸದಲ್ಲಿ ತೊಡಗಿಸುವಂತೆ ಮಾಡುವ; ಯೋಜನೆ=ಕಾರ್ಯ ರೂಪಕ್ಕೆ ತರಲೆಂದು ಕ್ರಮಬದ್ದವಾಗಿ ರೂಪಿಸಿರುವ ಕೆಲಸಗಳು;

**ಯುಗಪ್ರವರ್ತಕ ಯೋಜನೆ**=ಜನಸಮುದಾಯದ ಹಸಿವು, ಬಡತನ ಮತ್ತು ನಿರುದ್ಯೋಗವನ್ನು ತೊಲಗಿಸಿ, ಅವರ ಬದುಕಿಗೆ ಹೊಸ ಚೇತನವನ್ನು ನೀಡುವಂತಹ ದೊಡ್ಡ ದೊಡ್ಡ ಯೋಜನೆಗಳು/ಹಿಂದಿನ ಶತಮಾನಗಳಲ್ಲಿ ಜನರನ್ನು ಕಾಡುತ್ತಿದ್ದ ಸಾಮಾಜಿಕ ಕೇಡನ್ನು ನಾಶಮಾಡಿ, ಜನರೆಲ್ಲರಿಗೂ ಸರ್ವಸಮಾನತೆಯ ಮತ್ತು ನೆಮ್ಮದಿಯಿಂದ ಕೂಡಿದ ಬದುಕನ್ನು ರೂಪಿಸುವ ಯೋಜನೆಗಳು;

ಆವಿ+ಆಡುತ್ತದೆ; ಆವಿ=ನೀರನ್ನು ಕುದಿಸಿದಾಗ ಮೇಲಕ್ಕೆ ಏಳುವ ನೀರಿನ ಕಣಗಳ ಹಬೆ;

ಪ್ರತಿ ನಿತ್ಯ ಬೆಳಗ್ಗೆ ನಾವು ಓದುವ ದಿನಪತ್ರಿಕೆಗಳಲ್ಲಿ ದೇಶದ ಆಡಳಿತದ ಸೂತ್ರವನ್ನು ಹಿಡಿದಿರುವ ರಾಜಕಾರಣಿಗಳು, ಧರ್ಮದ ಗದ್ದುಗೆಯನ್ನು ಅಲಂಕರಿಸಿರುವ ಗುರುಗಳು ಮತ್ತು ಕೋಟಿಗಟ್ಟಲೆ ಸಂಪತ್ತಿನ ಒಡೆಯರಾದ ಬಂಡವಾಳಶಾಹಿಗಳು ದೇಶದ ಜನರ ಒಳಿತಿಗಾಗಿ ಆಡುತ್ತಿರುವ ಮಾತುಗಳನ್ನು ಮತ್ತು ರೂಪಿಸುತ್ತಿರುವ ಯೋಜನೆಗಳ ವಿವರಗಳನ್ನು ಓದುತ್ತಿರುತ್ತೇವೆ. ಯೋಜನೆ ಯಲ್ಲಿನ ಕಾರ್ಯಕ್ರಮಗಳೆಲ್ಲವೂ ಇಡಿ ಮಾನವ ಸಮುದಾಯವನ್ನೇ ಪ್ರಗತಿಯ ದಾರಿಯಲ್ಲಿ ಮುನ್ನಡೆಸುವಂತಹ ನುಡಿಗಳಿಂದ ಕೂಡಿರುತ್ತವೆ. ಆದರೆ ದಿನೇ ದಿನೇ ಮಾನವ ಸಮುದಾಯದ ಬದುಕು ಇನ್ನೂ ಹೆಚ್ಚಿನ ಸಂಕಟಗಳಿಗೆ ಬಲಿಯಾಗುತ್ತಿದೆ. ಇದಕ್ಕೆ ಕಾರಣವೇನೆಂದರೆ ಯುಗಪ್ರವರ್ತಕ ಯೋಜನೆಗಳನ್ನು ರೂಪಿಸುವವರ ಒಳ ಉದ್ದೇಶಗಳು ಬೇರೆಯಾಗಿರುತ್ತವೆ.

ನಾಡನ್ನು ಆಳುವ ಗದ್ದುಗೆಯಲ್ಲಿ ದೊರೆಯಿರಲಿ ಇಲ್ಲವೇ ಬೇರೆ ಯಾವುದೇ ಬಗೆಯ ಆಡಳಿತಗಾರನಿರಲಿ ಇಲ್ಲವೇ ಸರಕಾರವಿರಲಿ ಅವರು ರೂಪಿಸುವ

ಯೋಜನೆಗಳೆಲ್ಲವೂ ನಿಜಜೀವನದಲ್ಲಿ ಪ್ರಾಮಾಣಿಕವಾಗಿ ಕಾರ್ಯರೂಪಕ್ಕೆ ಬಂದಿದ್ದರೆ ದೇಶದಲ್ಲಿರುವ ಪ್ರಜೆಗಳೆಲ್ಲರೂ ನೆಮ್ಮದಿಯ ಜೀವನಕ್ಕೆ ಅತ್ಯಗತ್ಯವಾದ ಅನ್ನ,ಬಟ್ಟೆ,ವಸತಿ,ವಿದ್ಯೆ,ಉದ್ಯೋಗ ಮತ್ತು ಆರೋಗ್ಯವನ್ನು ಪಡೆಯುತ್ತಿದ್ದರು. ಆದರೆ ಇಂದಿಗೂ ನಮ್ಮ ಸುತ್ತಮುತ್ತಣ ಸಮಾಜದ ಎಲ್ಲೆಡೆಯಲ್ಲಿಯೂ ಹಸಿವು, ಬಡತನ ಮತ್ತು ಅಪಮಾನದಿಂದ ನರಳುತ್ತಿರುವವರ ಸಂಕೆಯು ಒಟ್ಟು ಜನಸಮುದಾಯದಲ್ಲಿ ಶೇ.೪೦ಕ್ಕಿಂತ ಹೆಚ್ಚಿದೆ.

ಮೇಲು ನೋಟಕ್ಕೆ ಆಳುವ ಸರಕಾರದ ಯೋಜನೆಗಳ ಸ್ವರೂಪ ಜನಪರವಾಗಿ ರುವಂತೆ ಕಂಡುಬಂದರೂ, ಅವು ಕಾರ್ಯರೂಪಕ್ಕೆ ಬರುವಾಗ ಯೋಜನೆಗಳಲ್ಲಿ ತೊಡಗಿಸಿದ್ದ ಹಣದಲ್ಲಿ ಬಹು ದೊಡ್ಡ ಪಾಲು ಮೇಲು ಜಾತಿಯವರ, ಮೇಲು ವರ್ಗದವರ, ರಾಜಕಾರಣಿಗಳ, ಬಂಡವಾಳಶಾಹಿಗಳ ಮತ್ತು ಆಡಳಿತಶಾಹಿಗಳ ಪಾಲಾಗುತ್ತದೆ. ಇದರಿಂದಾಗಿ ದುಡಿಯುವ ಶ್ರಮಜೀವಿಗಳಾದ ಕೋಟಿಗಟ್ಟಲೆ ಬಡಜನರ ಬದುಕಿನ ಸಂಕಟಗಳು ಹಾಗೆಯೇ ಮುಂದುವರಿಯುತ್ತಿರುತ್ತವೆ.

ದೊರೆಗಳು ಅಂದರೆ ಆಡಳಿತದ ಗದ್ದುಗೆಯಲ್ಲಿರುವ ವ್ಯಕ್ತಿಗಳು ಹಾಕುವ ಯೋಜನೆಗಳು ಅವರ ಅಧಿಕಾರವನ್ನು ಎಂದೆಂದಿಗೂ ಶಾಶ್ವತವಾಗಿ ಇರುವಂತೆ ಮಾಡಿಕೊಳ್ಳುವ ದಿಕ್ಕಿನಲ್ಲಿರುತ್ತವೆ. ಪ್ರಜೆಗಳನ್ನು ನಿಯಂತ್ರಿಸುವಂತಹ ಕಾಯಿದೆ ಗಳನ್ನು ಮಾಡುವುದರ ಜತೆಜತೆಗೆ ದೇಶಕ್ಕೆ ಶತ್ರುಗಳಿಂದ ಅಪಾಯವಿದೆಯೆಂಬ ಗುಲ್ಲನ್ನೆಬ್ಬಿಸಿ, ನಾವು ಆಡಳಿತದಲ್ಲಿ ಇದ್ದರೆ ಮಾತ್ರ ನಾಡು ಉಳಿಯುತ್ತದೆ, ಬೇರೆ ಯವರು ಬಂದರೆ ನಾಡು ನಾಶವಾಗುತ್ತದೆ ಎಂಬ ಹೆದರಿಕೆಯನ್ನು ಜನಮನದಲ್ಲಿ ಬಿತ್ತಿ, ಸದಾಕಾಲ ಜನಸಮುದಾಯವನ್ನು ಆತಂಕದಲ್ಲಿ ಇಟ್ಟಿರುತ್ತಾರೆ;

ಧರ್ಮ ಗುರುಗಳು ರೂಪಿಸುವ ಯೋಜನೆಗಳು ಎಂದೆಂದಿಗೂ ಇಡೀ ಮಾನವ ಸಮುದಾಯದ ಒಳಿತನ್ನು ಒಳಗೊಂಡಿರುವುದಿಲ್ಲ. ಜಗತ್ತಿನಲ್ಲಿರುವ ಹಲವು ಧರ್ಮಗಳ ಗುರುಗಳೆಲ್ಲರೂ ಮಾನವ ಸಮುದಾಯದಲ್ಲಿ ಪರಸ್ಪರ ಪ್ರೀತಿ, ಕರುಣೆ ಮತ್ತು ಗೆಳೆತನದ ನಂಟು ಇರಬೇಕೆಂದು ಬಾಯಲ್ಲಿ ಹೇಳುತ್ತಿದ್ದರೂ, ಇಡೀ ಜಗತ್ತಿನ ಚರಿತ್ರೆಯಲ್ಲಿ ಯಾವೊಂದು ಧರ್ಮವೂ ಸಾಮೂಹಿಕವಾಗಿ ತನ್ನದಲ್ಲದ ಮತ್ತೊಂದು ಧರ್ಮಕ್ಕೆ ಸೇರಿದ ಜನರ ಬಗ್ಗೆ ಸಹನೆಯಿಂದ ನಡೆದುಕೊಂಡಿಲ್ಲ. ಪ್ರತಿಯೊಂದು ಧರ್ಮದ ಗುರುವೂ ತಮ್ಮ ಧರ್ಮವೇ ಜಗತ್ತಿನಲ್ಲಿ ಅತ್ಯುತ್ತಮವೆಂದು ಹೇಳಿಕೊಳ್ಳುತ್ತಾರೆ.

ಜಾತಿ, ಧರ್ಮ ಮತ್ತು ದೇವರ ಹೆಸರಿನಲ್ಲಿ ನಡೆಯುವ ಯುದ್ಧ ಇಲ್ಲವೇ

ಹೊಡೆದಾಟದಲ್ಲಿ ತಮ್ಮ ಪಂಗಡಕ್ಕೆ ಸೇರಿರದ ಜನರನ್ನು ಸಾವು ನೋವುಗಳಿಗೆ ಗುರಿಮಾಡಿ ಗೆದ್ದಾಗ, ತಮ್ಮ ಧರ್ಮ ಉಳಿಯಿತೆಂದು ಹೆಮ್ಮೆಪಟ್ಟಿದ್ದಾರೆಯೇ ಹೊರತು, ಮಾನವಜೀವಿಗಳ ದುರಂತಕ್ಕಾಗಿ ಕಣ್ಣೀರನ್ನು ಹಾಕಿಲ್ಲ. ಪ್ರತಿಯೊಂದು ಧರ್ಮದ ಗುರುವೂ ತನ್ನ ಧರ್ಮದ ಇಲ್ಲವೇ ತನ್ನ ಜಾತಿಯ ಜನರ ಹಿತಕ್ಕಾಗಿ ಯೋಜನೆಗಳನ್ನು ರೂಪಿಸುತ್ತಾನೆಯೇ ಹೊರತು ಇತರ ಜಾತಿ ಧರ್ಮದವರ ಒಳಿತಿನ ಬಗ್ಗೆ ಚಿಂತಿಸುವುದಿಲ್ಲ.

ಬ್ಯಾಂಕರುಗಳು ಮತ್ತು ಎಣ್ಣೆದಣಿಗಳಂತಹ ಬಂಡವಾಳಶಾಹಿಗಳು ಹಾಕುವ ಯೋಜನೆಗಳು ಮೇಲು ನೋಟಕ್ಕೆ ತುಂಬಾ ಉಪಯುಕ್ತವಾಗಿರುವಂತೆ ಕಂಡು ಬರುತ್ತವೆ. ಆದರೆ ಅದರ ಅಂತರಂಗದಲ್ಲಿ ದುಡಿಯುವ ವರ್ಗದ ಜನರ ಸಂಪತ್ತನ್ನು ದೋಚುವ ನಿಯಮಗಳ ಜಾಲದ ಹೆಣಿಗೆಯಿರುತ್ತದೆ. ಹಣವನ್ನು ಸಾಲದ ರೂಪದಲ್ಲಿ ಕೊಡುವ ಯೋಜನೆಗಳೆಲ್ಲವೂ ಹೆಚ್ಚಿನ ಬಡ್ಡಿಯನ್ನು ಸುಲಿದು ಜನರನ್ನು ಸಾಲಸೋಲದ ಕೂಪಕ್ಕೆ ತಳ್ಳುವ ರೀತಿಯಲ್ಲಿಯೇ ಇರುತ್ತವೆ. ಹಣದ ಮುಗ್ಗಟ್ಟಿನಲ್ಲಿ ನರಳುತ್ತಿರುವ ಜನರು ಬೇರೆ ದಾರಿಯಿಲ್ಲದೆ ಬಂಡವಾಳಶಾಹಿಗಳ ಸಾಲದ ಬಲೆಗೆ ಸಿಲುಕಿ, ಅದರಿಂದ ಬಿಡುಗಡೆಯನ್ನು ಪಡೆಯುವುದಕ್ಕೆ ತುಂಬಾ ಶ್ರಮಪಡುತ್ತಿರುವ ಪ್ರಸಂಗಗಳನ್ನು ದಿನನಿತ್ಯ ನಾವು ನೋಡುತ್ತಿರುತ್ತೇವೆ..

ಆದ್ದರಿಂದಲೇ ದಿನ ಕಳೆದಂತೆಲ್ಲಾ ಬಂಡವಾಳಶಾಹಿಗಳ ಸಂಪತ್ತು ಇಮ್ಮಡಿಯಾಗಿ, ನೂರ್ಮಡಿಯಾಗಿ, ಸಾವಿರಾರು ಪಟ್ಟು ಹೆಚ್ಚಾದಂತೆಲ್ಲಾ ನಾಡಿನಲ್ಲಿ ದುಡಿಯುವ ವರ್ಗದ ಶ್ರಮಜೀವಿಗಳ ಬದುಕು ದುರಂತಮಯವಾಗುತ್ತಿದೆ.

ನಮ್ಮ ಕಣ್ಣಮುಂದಿನ ಸಮಾಜದಲ್ಲಿ ಶ್ರಮಜೀವಿಗಳ ದುಡಿಮೆಯಿಂದ ಉತ್ಪನ್ನಗೊಳ್ಳುವ ಸಂಪತ್ತನ್ನು ಮತ್ತು ನಿಸರ್ಗ ಸಂಪತ್ತನ್ನು ದೋಚುವ ಕೆಲಸದಲ್ಲಿ ಆಡಳಿತಗಾರರು, ಧರ್ಮಗುರುಗಳು ಮತ್ತು ಬಂಡವಾಳಶಾಹಿಗಳು ಪರಸ್ಪರ ಸಾಮೀಲಾಗಿರುವ ವಾಸ್ತವ ಎದ್ದು ಕಾಣುತ್ತಿದೆ.

ಚಹದ ಪಾತ್ರೆಯಲ್ಲಿ ನೀರನ್ನು ಹಾಕಿ, ಅದನ್ನು ಕುದಿಸಿ, ಚಹದ ಪುಡಿಯನ್ನು ಮತ್ತು ಬೆಲ್ಲ/ಸಕ್ಕರೆಯನ್ನು ಹಾಕದೆ ಬಿಟ್ಟಾಗ, ಬರಿ ನೀರು ಕುದಿಕುದಿದು ಆವಿಯಾಗುವ, ನೀರಿನ ಗುಳ್ಳೆಗಳು ಮೇಲೆದ್ದು, ಮರುಗಳಿಗೆಯಲ್ಲಿಯೇ ಇಲ್ಲವಾಗುವ, ಇನ್ನುಳಿದ ಕಾದ ನೀರು ಉಕ್ಕಿ ಹರಿದು ಒಲೆಯ ಬೆಂಕಿಯೇ ನಂದಿಹೋಗುವ ರೂಪಕದ ಮೂಲಕ ಜನರನ್ನು ಮರುಳು ಮಾಡುವ ಮಾತುಗಳನ್ನಾಡುತ್ತ, ತಮ್ಮ ಉಳಿವಿಗಾಗಿಯೇ ಈ ಮೂವರು ರೂಪಿಸುವ

ಯೋಜನೆಗಳಿಂದ ನಾಡಿನ ಜನತೆಗೆ ಯಾವುದೇ ಬಗೆಯ ಪ್ರಯೋಜನವಿಲ್ಲ ಎಂಬುದನ್ನು ಈ ಕವನದಲ್ಲಿ ಚಿತ್ರಿಸಲಾಗಿದೆ.



# ೯. ಪ್ರಜಾಹಿತೈಷಿ ನ್ಯಾಯಾಧೀಶ

**ಅನುವಾದ: ಶಾ.ಬಾಲುರಾವ್**

ಲಾಸ್ ಏಂಜಲೀಸ್ ನಗರದಲ್ಲಿ
ಅಮೆರಿಕದ ಪೌರರಾಗಬಯಸುವವರನ್ನು
ತನಿಖೆ ಮಾಡುವ ನ್ಯಾಯಾಧೀಶನ ಮುಂದೆ
ಒಬ್ಬ ಮೂಲ ಇಟಲಿ ನಿವಾಸಿ
ಹೊಟೆಲ್ ನಡೆಸುವವ ಹಾಜರಾದ

ಜೋರು ತಯಾರಿಮಾಡಿಕೊಂಡಿದ್ದರೂ
ದುರದೃಷ್ಟವಶಾತ್ ಇಂಗ್ಲಿಷ್ ಬಾರದ ಕಾರಣ
ಪರೀಕ್ಷೆಯಲ್ಲಿ ಹೀಗೆ ಉತ್ತರಿಸಿದ್ದ:
ಎಂಟನೆ ತಿದ್ದುಪಡಿ ಯಾವುದು
ಇಟಲಿ ನಿವಾಸಿ ಹಿಂಜರಿಯುತ್ತ ಕೊಟ್ಟ ಉತ್ತರ: **1492**
ಅರ್ಜಿದಾರರಿಗೆ ದೇಶ ಭಾಷೆ ಗೊತ್ತಿರಬೇಕೆಂಬ ಕಾಯಿದೆಯಿಂದಾಗಿ
ಅವನ ಅರ್ಜಿ ತಿರಸ್ಕೃತವಾಯಿತು.

ಅವನ ಮತ್ತೆ ಬಂದ
ಮೂರು ತಿಂಗಳ ಕಾಲ ಭಾಷಾಭ್ಯಾಸ ಮುಂದುವರಿಸಿ
ಆದರೂ ಭಾಷೆ ಬರದ ಕೊರತೆಯಿನ್ನೂ ಇದ್ದೇ ಇತ್ತು
ಈ ಬಾರಿ ಅವನು ಎದುರಿಸಿದ ಪ್ರಶ್ನೆ:
ನಾಡಯುದ್ಧದಲ್ಲಿ ಗೆದ್ದ ಜನರಲ್ ಯಾರು
ಅವನ ಉತ್ತರ
ದನಿಯೆತ್ತರಿಸಿ ಸೌಜನ್ಯದಿಂದ ಕೊಟ್ಟಿದ್ದು: **1492**

ಹಿಂತಿರುಗಿ ಹೋಗಿ ಮೂರನೆ ಸಲ ಬಂದಾಗ
ಅವನು ಉತ್ತರಿಸಿದ ಮೂರನೆ ಪ್ರಶ್ನೆ:
ರಾಷ್ಟ್ರಾಧ್ಯಕ್ಷರನ್ನು ಎಷ್ಟು ವರ್ಷದ ಅವಧಿಗೆ ಆರಿಸಲಾಗುತ್ತೆ
ಮತ್ತೆ ಅದೇ ಉತ್ತರ: **1492**

ಆ ಮನುಷ್ಯನನ್ನು ಮೆಚ್ಚಿಕೊಂಡಿದ್ದ ನ್ಯಾಯಾಧೀಶನಿಗೆ
ಅವನು ಹೊಸ ಭಾಷೆಯನ್ನು ಕಲಿಯಲಾರನೆಂದು
ಈಗ ಖಚಿತವಾಯಿತು
ಅವನು ಹೇಗೆ ಹೊಟ್ಟೆ ಹೊರೆಯುತ್ತಾನೆಂದು ಕೇಳಿದ್ದಕ್ಕೆ
ಕಷ್ಟದ ದುಡಿಮೆಯಿಂದ ಎಂದು ತಿಳಿದುಬಂತು

ಮತ್ತೆ ನಾಲ್ಕನೆ ಬಾರಿ ಹಾಜರಾದಾಗ
ನ್ಯಾಯಾಧೀಶ ಮುಂದಿಟ್ಟ ಪ್ರಶ್ನೆ:
ಅಮೆರಿಕವನ್ನು ಕಂಡು ಹಿಡಿದಿದ್ದು ಯಾವಾಗ
ಅವನು ಸರಿಯಾಗಿ **1492** ಎಂದು ಉತ್ತರ ಕೊಟ್ಟನೆಂದು
ಅವನಿಗೆ ಪೌರತ್ವ ನೀಡಲಾಯಿತು.

**ಒಳ್ಳೆಯ ರೀತಿಯಲ್ಲಿ ತನ್ನ ಬದುಕನ್ನು ಕಟ್ಟಿಕೊಳ್ಳುತ್ತಿರುವ ವ್ಯಕ್ತಿಗೆ ದೇಶದಲ್ಲಿರುವ ಕಾನೂನು ನೆರವಾಗಬೇಕೆ ಹೊರತು ತೊಡಕಾಗಬಾರದು ಎಂಬ ನಿಲುವುಳ್ಳ ನ್ಯಾಯಾಧೀಶರೊಬ್ಬರ ವ್ಯಕ್ತಿತ್ವವನ್ನು ಈ ಕವನದಲ್ಲಿ ಚಿತ್ರಿಸಲಾಗಿದೆ.**

ಪ್ರಜಾಹಿತೈಷಿ=ಪ್ರಜೆಗಳಿಗೆ ಒಳಿತನ್ನು ಮಾಡುವವನು; ನ್ಯಾಯಾಧೀಶ=ದೇಶದ ಕಾನೂನಿಗೆ ಅನುಗುಣವಾಗಿ ಯಾವುದೇ ವ್ಯಕ್ತಿಯ ಇಲ್ಲವೇ ಪ್ರಸಂಗದಲ್ಲಿನ ಸರಿ/ತಪ್ಪುಗಳನ್ನು ಪರಿಶೀಲಿಸಿ, ಸರಿಯಾಗಿರುವುದರ ಪರವಾಗಿ ತೀರ್ಪನ್ನು ಕೊಡುವ ಕೆಲಸದಲ್ಲಿ ನಿರತನಾಗಿರುವ ವ್ಯಕ್ತಿ;

**ಲಾಸ್ ಏಂಜಲೀಸ್ ನಗರ**=ಉತ್ತರ ಅಮೆರಿಕ ದೇಶದಲ್ಲಿರುವ ಒಂದು ನಗರ; ಪೌರರು+ಆಗಬಯಸುವವರನ್ನು; ಪೌರ=ಒಂದು ದೇಶದ ಪ್ರಜೆ. ಹುಟ್ಟಿನಿಂದ ವ್ಯಕ್ತಿಯು ಸಹಜವಾಗಿಯೇ ಒಂದು ದೇಶದ ಪ್ರಜೆಯಾದರೆ, ಇತರ ದೇಶಗಳಿಂದ ವಲಸೆ ಬಂದವರು, ತಾವು ಬಂದು ನೆಲಸಿರುವ ದೇಶದ ಕಾನೂನಿಗೆ ಅನುಗುಣವಾಗಿ ಅಲ್ಲಿನ ಪೌರತ್ವವನ್ನು ಪಡೆಯಬೇಕು. ಈ ರೀತಿ ಪೌರತ್ವವನ್ನು

ಪಡೆದ ನಂತರ ಆ ದೇಶದಲ್ಲಿನ ಇತರ ಪ್ರಜೆಗಳಂತೆ ಎಲ್ಲ ವ್ಯವಹಾರಗಳನ್ನು ಮಾಡುವ ಹಕ್ಕುಗಳನ್ನು ಹೊಂದುತ್ತಾರೆ;

ಬಯಸು=ಇಚ್ಚಿಸು; ತನಿಖೆ=ವಿಚಾರಣೆ; ಮೂಲ ಇಟಲಿ ನಿವಾಸಿ=ಇಟಲಿ ದೇಶದ ಪ್ರಜೆ; ಹಾಜರಾದ=ಬಂದನು; ಜೋರು=ಅತಿ ಹೆಚ್ಚಾಗಿ/ಬಹಳವಾಗಿ; ತಯಾರು=ಸಿದ್ಧತೆ; ದುರದೃಷ್ಟವಶಾತ್=ಇಂಗ್ಲಿಶ್ ನುಡಿಯನ್ನು ಸರಿಯಾಗಿ ತಿಳಿದುಕೊಂಡು ಕಲಿಯಲಾಗದೆ; ಪರೀಕ್ಷೆ=ನ್ಯಾಯಾಧೀಶರು ವಿಚಾರಣೆ ಮಾಡಿದಾಗ;

ಎಂಟನೆ ತಿದ್ದುಪಡಿ=ಅಮೆರಿಕ ದೇಶದ ಸಂವಿಧಾನದಲ್ಲಿ ಕೆಲವೊಮ್ಮೆ ಮಾಡುವ ಬದಲಾವಣೆಗಳಲ್ಲಿ ಎಂಟನೆಯದು; ಹಿಂಜರಿ=ಅಳುಕುತ್ತ/ತಾನು ಹೇಳುತ್ತಿರುವುದು ಸರಿಯೊ ತಪ್ಪೊ ಎಂಬುದು ಗೊತ್ತಾಗದೆ ತಡವರಿಸುತ್ತ; ದೇಶ ಭಾಷೆ=ದೇಶದ ಶಾಸಕಾಂಗ–ಕಾರ್ಯಾಂಗ–ನ್ಯಾಯಾಂಗಗಳಲ್ಲಿ ಬಳಕೆಯಾಗುವ ನುಡಿ; ಕಾಯಿದೆ=ಕಾನೂನು; ತಿರಸ್ಕೃತ=ಕಡೆಗಣಿಸು/ಒಪ್ಪದಿರುವುದು;

**ಅರ್ಜಿ ತಿರಸ್ಕೃತವಾಯಿತು**=ಅಮೆರಿಕ ದೇಶದ ಪ್ರಜೆಯಾಗಬೇಕಾದರೆ ದೇಶದ ಆಡಳಿತ ನುಡಿಯಾದ ಇಂಗ್ಲಿಶನ್ನು ಕಲಿತಿರಲೇಬೇಕೆಂಬ ಕಾನೂನು ಇದೆ. ಈ ವ್ಯಕ್ತಿಗೆ ಇಂಗ್ಲಿಶ್ ಬಾರದ ಕಾರಣ ಕಾನೂನಿನ ಎಲ್ಲೆಯೊಳಗೆ ಇವನ ಕೋರಿಕೆಯನ್ನು ನಿರಾಕರಿಸಲಾಯಿತು;

ಭಾಷಾ+ಅಭ್ಯಾಸ; ಅಭ್ಯಾಸ=ಕಲಿಕೆ; ನಾಡ ಯುದ್ಧ=ಅಮೆರಿಕದ ದೇಶದಲ್ಲಿದ್ದ ಪ್ರಜೆಗಳ ನಡುವೆಯೇ ನಡೆದಿದ್ದ ಕಾಳೆಗ; ಜನರಲ್=ಸೇನಾನಿ; ದನಿ+ಎತ್ತರಿಸಿ; ದನಿಯೆತ್ತರಿಸಿ=ಕೇಳುವವರಿಗೆ ಚೆನ್ನಾಗಿ ತಿಳಿಯುವಂತೆ ಗಟ್ಟಿಯಾದ ದನಿಯಲ್ಲಿ; ಸೌಜನ್ಯ=ವಿನಯಶೀಲತೆಯಿಂದ; ರಾಷ್ಟ್ರಾಧ್ಯಕ್ಷ=ಅಮೆರಿಕ ದೇಶದ ಪ್ರೆಸಿಡೆಂಟ್; ಅವಧಿ=ಕಾಲ/ಸಮಯ; ಆರಿಸು=ಆಯ್ಕೆಮಾಡುವುದು;

**ಆ ಮನುಷ್ಯನನ್ನು ಮೆಚ್ಚಿಕೊಂಡಿದ್ದ ನ್ಯಾಯಾಧೀಶನಿಗೆ**=ಇಟಲಿಯಿಂದ ವಲಸೆ ಬಂದಿರುವ ವ್ಯಕ್ತಿಯು ಅಮೆರಿಕದ ಪ್ರಜೆಯಾಗುವುದಕ್ಕೆ ಎಡೆಬಿಡದೆ ನಡೆಸುತ್ತಿರುವ ಪ್ರಯತ್ನಶೀಲತೆ ಮತ್ತು ಅವನ ವಿನಯವಂತಿಕೆಯು ನ್ಯಾಯಾಧೀಶನ ಮೆಚ್ಚುಗೆಗೆ ಪಾತ್ರವಾಗಿದೆ; ಖಚಿತ=ನಿಶ್ಚಿತ;

**ಅವನು ಹೊಸಭಾಷೆಯನ್ನು ಕಲಿಯಲಾರನೆಂದು ಈಗ ಖಚಿತವಾಯಿತು**=ಈ ವ್ಯಕ್ತಿಯು ಇಂಗ್ಲಿಶ್ ನುಡಿಯನ್ನು ಕಲಿಯಲಾರನೆಂಬ ವಾಸ್ತವ ನ್ಯಾಯಾಧೀಶರಿಗೆ ಮನದಟ್ಟಾಯಿತು; ನ್ಯಾಯಾಧೀಶರು ಇಂಗ್ಲಿಶ್ ನುಡಿಯಲ್ಲಿ ಕೇಳಿದ ಪ್ರಶ್ನೆಗಳು ಈತನಿಗೆ ತಿಳಿಯುತ್ತಿರಲಿಲ್ಲ. ಇಟಲಿ ದೇಶದಿಂದ ಅಮೆರಿಕ ದೇಶಕ್ಕೆ ಬಂದಿದ್ದ ಈ

ವ್ಯಕ್ತಿಯು **೧೪೯೨** ಎಂಬ ಸಂಕೆಯನ್ನು ಇಂಗ್ಲಿಶಿನಲ್ಲಿ ಹೇಳುವುದೊಂದನ್ನು ಮಾತ್ರ ಕಲಿತಿದ್ದ. ಆದ್ದರಿಂದ ನ್ಯಾಯಾದೀಶರು ಕೇಳುವ ಯಾವುದೇ ಬಗೆಯ ಪ್ರಶ್ನೆಗಳಿಗೆ ತನಗೆ ಗೊತ್ತಿದ್ದ ಇದೊಂದು ಸಂಕೆಯನ್ನು ಮಾತ್ರ ಹೇಳುತ್ತಿದ್ದ;

ಹೊಟ್ಟೆ ಹೊರೆಯುವುದು=ಇದೊಂದು ನುಡಿಗಟ್ಟು. ಒಬ್ಬ ವ್ಯಕ್ತಿಯು ತನ್ನ ಜೀವನವನ್ನು ಕಟ್ಟಿಕೊಳ್ಳುವುದಕ್ಕಾಗಿ ಯಾವ ಬಗೆಯ ದುಡಿಮೆಯ ಮೂಲಕ ಹಣವನ್ನು ಗಳಿಸುತ್ತಾನೆ ಎಂಬ ಸಂಗತಿ; ಕಷ್ಟದ ದುಡಿಮೆ=ಪರಿಶ್ರಮದಿಂದ ಕೂಡಿದ ಕೆಲಸ;

**ಅವನು ಹೇಗೆ ಹೊಟ್ಟೆಹೊರೆಯುತ್ತಾನೆಂದು ಕೇಳಿದ್ದಕ್ಕೆ ಕಷ್ಟದ ದುಡಿಮೆಯಿಂದ ಎಂದು ತಿಳಿದುಬಂತು**=ಅವನಿಗೆ ಅಮೆರಿಕಾದ ದೇಶ ಬಾಷೆಯಾದ ಇಂಗ್ಲಿಶಿನಲ್ಲಿ ವ್ಯವಹರಿಸಲು ಬಾರದಿದ್ದರೂ, ಪರಿಶ್ರಮದ ದುಡಿಮೆಯಿಂದ ತನ್ನ ಜೀವನವನ್ನು ಅಮೆರಿಕಾದಲ್ಲಿ ಕಟ್ಟಿಕೊಳ್ಳುತ್ತಿದ್ದಾನೆ ಎಂಬ ಮಾಹಿತಿಯು ನ್ಯಾಯಾದೀಶರಿಗೆ ಅವನ ಅರ್ಜಿಯಲ್ಲಿದ್ದ ಕಸುಬಿನ ವಿವರದ ಮೂಲಕ ತಿಳಿದುಬಂದಿತು;

೧೪೯೨ರಲ್ಲಿ ಕ್ರಿಸ್ಟೋಪರ್ ಕೊಲಂಬಸ್ ಎಂಬ ಹೆಸರಿನ ಇಟಲಿ ದೇಶದ ನಾವಿಕನು ಅಮೆರಿಕ ದೇಶವನ್ನು ಗುರುತಿಸಿದನು ಎಂದು ಚರಿತ್ರೆಯಲ್ಲಿ ಮಾಹಿತಿಯಿದೆ;

**ಮತ್ತೆ ನಾಲ್ಕನೆಯ ಬಾರಿ ಹಾಜರಾದಾಗ ನ್ಯಾಯಾದೀಶ ಮುಂದಿಟ್ಟ ಪ್ರಶ್ನೆ: ಅಮೆರಿಕವನ್ನು ಕಂಡುಹಿಡಿದಿದ್ದು ಯಾವಾಗ. ಅವನು ಸರಿಯಾಗಿ ೧೪೯೨ ಎಂದು ಉತ್ತರ ಕೊಟ್ಟನೆಂದು ಅವನಿಗೆ ಪೌರತ್ವ ನೀಡಲಾಯಿತು**=ಅವನಿಗೆ ಗೊತ್ತಿರುವ ಒಂದೇ ಒಂದು ಇಂಗ್ಲಿಶ್ ಪದಕ್ಕೆ ಸರಿಹೊಂದುವ ಅಮೆರಿಕ ದೇಶದ ಸಂಗತಿಯನ್ನು ಕುರಿತು ನ್ಯಾಯಾದೀಶರು ಈಗ ಪ್ರಶ್ನೆಯನ್ನು ಕೇಳಿ, ಕಾನೂನಿನ ಪ್ರಕಾರ ಸರಿಯಾದ ಉತ್ತರವನ್ನು ಪಡೆದು, ಅಮೆರಿಕ ದೇಶದ ಪ್ರಜೆಯಾಗುವ ಅವಕಾಶವನ್ನು ಕಲ್ಪಿಸುವ ತೀರ್ಪು ನೀಡಿದರು.

ಈ ಕವನದಲ್ಲಿ ಚಿತ್ರಣಗೊಂಡಿರುವ ಸಂಗತಿಯು ನ್ಯಾಯಾದೀಶರ ಮಾನವೀಯ ನಿಲುವನ್ನು ಎತ್ತಿಹಿಡಿಯುವುದರ ಜತೆಗೆ, ಜಗತ್ತಿನ ದೇಶಗಳಲ್ಲಿ ಮಾನವರೇ ನಿಯೋಜಿಸಿಕೊಂಡಿರುವ ಕಾನೂನುಗಳು ಜಾತಿ, ಮತ, ಜನಾಂಗ, ಪ್ರಾಂತ್ಯ ಮತ್ತು ನುಡಿಗಳೆಂಬ ಎಲ್ಲೆಯನ್ನು ಮೀರಿ ಸಹಮಾನವರ ಬಗ್ಗೆ ಪ್ರೀತಿ, ಕರುಣೆ, ಸಮಾನತೆ ಮತ್ತು ಗೆಳೆತನದ ನಡೆನುಡಿಗಳಿಂದ ಕೂಡಿರಬೇಕು ಎಂಬುದನ್ನು ಪ್ರತಿಪಾದಿಸುತ್ತದೆ. ❖

# ೧೦. ಕಗ್ಗತ್ತಲ ಕಾಲದಲ್ಲಿ

**ಅನುವಾದ : ಶಾ.ಬಾಲುರಾವ್**

ಕಗ್ಗತ್ತಲ ಕಾಲದಲ್ಲಿ
ಹಾಡುವುದೂ ಉಂಟೆ
ಹೌದು ಹಾಡುವುದೂ ಉಂಟು
ಕಗ್ಗತ್ತಲ ಕಾಲವನ್ನು ಕುರಿತು.

**ಮಾನವ ಸಮುದಾಯವು ಒಲವು ನಲಿವು ನೆಮ್ಮದಿಯಿಂದ ಜತೆಗೂಡಿ ಬಾಳುವುದಕ್ಕೆ ಆಗದಂತಹ ಕೆಡುಕಿನ ಸನ್ನಿವೇಶ ಉಂಟಾದಾಗ, ಬರಹಗಾರರು ಎದೆಗುಂದಿ ಹಿಂಜರಿದು ಸುಮ್ಮನಾಗದೆ, ತಮ್ಮ ಮಾತು ಮತ್ತು ಬರಹದ ಮೂಲಕ ಅಂತಹ ಕೆಡುಕು ಉಂಟಾಗಲು ಕಾರಣವಾದ ವಾಸ್ತವದ ಸಂಗತಿಗಳನ್ನು ಜನರಿಗೆ ಮನದಟ್ಟು ಮಾಡಿಸಿ, ಕೆಡುಕಿನ ಎದುರಾಗಿ ಒಗ್ಗೂಡಿ ಹೋರಾಡುವ ಮನೋಬಲವನ್ನು ಜನರಲ್ಲಿ ಮೂಡಿಸುವ ಕೆಲಸವನ್ನು ಮಾಡಬೇಕೆಂಬ ಸಂಗತಿಯನ್ನು ಈ ಕವನದಲ್ಲಿ ಹೇಳಲಾಗಿದೆ.**

ಕರಿದು+ಕತ್ತಲು>ಕರ್ಗತ್ತಲು>ಕಗ್ಗತ್ತಲು.

ಕರಿದು=ಕಪ್ಪು ಬಣ್ಣ; ಕತ್ತಲು=ಬೆಳಕು ಇಲ್ಲದಿರುವುದು; ಕಗ್ಗತ್ತಲು= ತುಸುವಾದರೂ ಬೆಳಕಿಲ್ಲದೆ ಸಂಪೂರ್ಣವಾಗಿ ಕತ್ತಲು ಕವಿದಿರುವುದು;

ಈ ಕವನದ ತಲೆಬರಹವಾದ **'ಕಗ್ಗತ್ತಲ ಕಾಲದಲ್ಲಿ'** ಎಂಬ ನುಡಿಗಟ್ಟು ಒಂದು ರೂಪಕವಾಗಿ ಬಳಕೆಯಾಗಿದೆ.

ಮಾನವ ಸಮುದಾಯ ನೆಮ್ಮದಿಯಿಂದ ಬಾಳುವುದಕ್ಕೆ ಅನ್ನ, ಬಟ್ಟೆ, ವಸತಿ, ವಿದ್ಯೆ, ಉದ್ಯೋಗ, ಆರೋಗ್ಯದ ಸಂಗತಿಗಳು ಅತ್ಯಗತ್ಯವಾಗಿರುವಂತೆಯೇ ಜನರು ಪರಸ್ಪರ ಪ್ರೀತಿ, ಕರುಣೆ, ಸಮಾನತೆ ಮತ್ತು ಗೆಳೆತನದಿಂದ ಬಾಳುವಂತಹ ಸಾಮಾಜಿಕ ಪರಿಸರವಿರಬೇಕು.

ಆದರೆ ನಾಡಿನ ಆಡಳಿತ ಗದ್ದುಗೆಯಲ್ಲಿರುವ ವ್ಯಕ್ತಿಗಳು, ಮೇಲು ಜಾತಿಯ ಜನರು ಮತ್ತು ಸಿರಿವಂತರು ಜತೆಗೂಡಿ ತಮ್ಮ ಸಂಪತ್ತನ್ನು ಮತ್ತು ಅಧಿಕಾರವನ್ನು ಉಳಿಸಿಕೊಳ್ಳುವುದಕ್ಕಾಗಿ ನಾಡಿನ ಜನಸಮುದಾಯಗಳ ನಡುವೆ ಜನಾಂಗ, ಜಾತಿ, ಧರ್ಮ ಮತ್ತು ದೇವರ ಹೆಸರಿನಲ್ಲಿ ಅಸೂಯೆ, ಅನುಮಾನ, ಹಗೆತನ ಮತ್ತು ಸೇಡಿನ ಭಾವನೆಗಳನ್ನು ಕೆರಳಿಸಿ, ಜನರು ತಮ್ಮತಮ್ಮಲ್ಲಿಯೇ ಕಚ್ಚಾಟ ಕಾದಾಟ, ಕೊಲೆ ಸುಲಿಗೆಯಲ್ಲಿ ತೊಡಗುವಂತೆ ಬಹುಬಗೆಯ ಹುನ್ನಾರಗಳನ್ನು ಹೂಡುತ್ತಿರುತ್ತಾರೆ. ಆಡಳಿತದ ತಪ್ಪುಗಳನ್ನು ಎತ್ತಿತೋರಿಸುವವರನ್ನು ದೇಶದ್ರೋಹಿಗಳು... ಧರ್ಮದ್ರೋಹಿಗಳು... ಭಯೋತ್ಪಾದಕರು ಎಂದು ಆಪಾದಿಸಿ ಸೆರೆಮನೆಗೆ ತಳ್ಳುವ, ಹಿಂಸಿಸುವ ಮತ್ತು ಕೊಲ್ಲುವ ಕ್ರೂರತನಕ್ಕೆ ಆಡಳಿತದ ಗದ್ದುಗೆಯಲ್ಲಿ ಕುಳಿತಿರುವವರು ಮುಂದಾಗುತ್ತಾರೆ.

ಆಡಳಿತದ ಗದ್ದುಗೆಯಲ್ಲಿ ಕುಳಿತವರ ಬೆಂಬಲದಿಂದ ಮೇಲುಜಾತಿಯವರು ಕೆಳಜಾತಿಗಳ ಜನರ ಮೇಲೆ ಮತ್ತು ಪ್ರಬಲ ಕೋಮಿನವರು ದುರ್ಬಲ ಕೋಮಿನವರ ಮೇಲೆ ದೇಶದಲ್ಲಿ ಜಾರಿಯಲ್ಲಿರುವ ಕಾನೂನನ್ನು ಲೆಕ್ಕಿಸದೆ ನಡೆಸುವ ದಬ್ಬಾಳಿಕೆ ಹಾಗೂ ಮಾಡುವ ಹಿಂಸಾಚಾರಕ್ಕೆ ಅಡೆತಡೆಗಳೇ ಇಲ್ಲವಾಗುತ್ತವೆ. ಜನಸಾಮಾನ್ಯರು ನೆಮ್ಮದಿಯಿಂದ ಜೀವನವನ್ನು ನಡೆಸಲು ದಿಕ್ಕುತೋಚದಂತಾಗಿ, ಸಾವು ನೋವಿನ ಆತಂಕದಿಂದಲೇ ಬದುಕಿನ ಪ್ರತಿಯೊಂದು ಗಳಿಗೆಯನ್ನು ಎಣಿಸುತ್ತಿರುತ್ತಾರೆ. ಇಂತಹ ಕಾಲವನ್ನು ಕಗ್ಗತ್ತಲ ಕಾಲವೆಂಬ ರೂಪಕ ಚಿತ್ರಿಸುತ್ತದೆ.

ಹಾಡು=ಮಾನವರು ತಮ್ಮ ಜೀವನದ ನೋವು ನಲಿವುಗಳನ್ನು, ಮನದಲ್ಲಿ ಮೂಡುವ ಕಲ್ಪನೆಗಳನ್ನು ಮತ್ತು ಚಿಂತನೆಗಳನ್ನು ಇಂಪಾದ ದನಿಯಲ್ಲಿ ನಾದಮಯವಾಗಿ ಹೊರಹೊಮ್ಮಿಸುವ ನುಡಿ; ಹಾಡುವುದೂ ಉಂಟೆ= ಎದೆತುಂಬಿ ಹಾಡುತ್ತಾರೆಯೇ/ಪಟ್ಟಪಾಡೆಲ್ಲವನ್ನೂ ಹಾಡುವುದಕ್ಕೆ ಆಗುತ್ತದೆಯೇ; ಹೌದು=ಆಗುವುದು; ಹಾಡುವುದೂ ಉಂಟು=ಹಾಡುವುದು ಕಂಡುಬರುತ್ತದೆ; ಕುರಿತು=ಉದ್ದೇಶಿಸಿ;

**ಕಗ್ಗತ್ತಲ ಕಾಲವನ್ನು ಕುರಿತು ಹಾಡುವುದು**=ಕಗ್ಗತ್ತಲ ಕಾಲ ಉಂಟಾಗಲು

ಕಾರಣಗಳೇನು ಎಂಬುದನ್ನು ಜನಮನಕ್ಕೆ ಅರಿವಾಗುವಂತೆ ವಿವರಿಸಿ ಹೇಳಿ, ಕಗ್ಗತ್ತಲು ಕವಿದಿರುವ ಎಡೆಯಲ್ಲಿ ಬೆಳಕು ಹರಿಯುವಂತೆ ಮಾಡಲು ಏನನ್ನು ಮಾಡಬೇಕೆಂಬುದನ್ನು ಜನರಿಗೆ ತಿಳಿಸುವ ಹೊಣೆಗಾರಿಕೆಯು ಬರಹಗಾರರ ಪಾಲಿಗೆ ಇರುತ್ತದೆ. ಜನಮನದಲ್ಲಿ ಕವಿದಿರುವ ಹಗೆತನ ಮತ್ತು ಕ್ರೂರತನದ ಒಳಮಿಡಿತಗಳ ಕತ್ತಲೆಯನ್ನು ಹೋಗಲಾಡಿಸಿ, ಜನಮನದಲ್ಲಿ ಪರಸ್ಪರ ಪ್ರೀತಿ, ಕರುಣೆ, ಸಮಾನತೆ ಮತ್ತು ಗೆಳೆತನದಿಂದ ಕೂಡಿದ ಮಾನವೀಯತೆಯ ಬೆಳಕನ್ನು ಪಸರಿಸುವಂತಹ ಸಂಗತಿಗಳನ್ನು ಬರಹಗಾರರು ಹೇಳಬೇಕು.

ಈ ಕವನದಲ್ಲಿ ನಿರೂಪಣೆಗೊಂಡಿರುವ ಸಂಗತಿಗಳನ್ನು ಬ್ರೆಕ್ಟ್ ಅವರ ಜೀವನದ ಹಿನ್ನೆಲೆಯಲ್ಲಿಯೂ ನೋಡಬಹುದು.

ಬ್ರೆಕ್ಟ್ ಅವರು **'ಕಗ್ಗತ್ತಲ ಕಾಲದಲ್ಲಿ'** ಎಂಬ ಈ ಕವನವನ್ನು ಕ್ರಿಶ ೧೯೩೯ರಲ್ಲಿ ಸ್ವೀಡನ್ ದೇಶದಲ್ಲಿದ್ದಾಗ ರಚಿಸಿದರು. ಈ ವೇಳೆಗಾಗಲೇ ಜರ್ಮನಿಯಲ್ಲಿ ಹಿಟ್ಲರನ ಜನಾಂಗೀಯ ದಾಳಿಯಲ್ಲಿ ಯಹೂದಿಗಳ ಮೇಲೆ ಹಲ್ಲೆ, ಕೊಲೆ, ಸುಲಿಗೆ ಹೆಚ್ಚಾಗಿದ್ದವು. ಹಿಟ್ಲರನ ನಿರಂಕುಶ ಆಡಳಿತದ ವಿರುದ್ಧವಾಗಿ ಜನರಲ್ಲಿ ಎಚ್ಚರವನ್ನು ಮೂಡಿಸುತ್ತಿದ್ದ ಬರಹಗಾರರ ಪುಸ್ತಕಗಳನ್ನು ಬಹಿರಂಗವಾಗಿ ಸುಟ್ಟು, ಬರಹಗಾರರನ್ನು ಸೆರೆಮನೆಗೆ ತಳ್ಳುವ ಮತ್ತು ಕೊಲ್ಲುವ ಯೋಜನೆಯನ್ನು ನಾಜಿ ಸರ್ಕಾರ ಹಾಕಿಕೊಂಡಿತ್ತು. ಈ ಪಟ್ಟಿಯಲ್ಲಿ ಯಹೂದಿ ಜನಸಮುದಾಯಕ್ಕೆ ಸೇರಿದ್ದ ಬ್ರೆಕ್ಟ್ ಅವರು ಹೆಸರು ಇತ್ತು.

ಹಿಟ್ಲರನ ಕೆಂಗಣ್ಣಿಗೆ ಗುರಿಯಾಗಿದ್ದ ಬ್ರೆಕ್ಟ್ ಅವರು ಕ್ರಿ.ಶ.೧೯೩೩ ರಲ್ಲಿ ಬರ್ಲಿನ್ ನಗರವನ್ನು ತೊರೆದು ದೇಶಾಂತರವಾಸಿಯಾಗಿ ಆಸ್ಟ್ರಿಯಾ, ಡೆನ್ಮಾರ್ಕ್, ಫಿನ್ಲ್ಯಾಂಡ್, ಸ್ವೀಡನ್, ಸ್ವಿಟ್ಜರ್‌ಲ್ಯಾಂಡ್, ಫ್ರಾನ್ಸ್ ಗಳಲ್ಲಿ ಕೆಲವು ವರುಶಗಳ ಕಾಲ ಇದ್ದು, ೧೯೪೧ರಲ್ಲಿ ಅಮೆರಿಕ ದೇಶಕ್ಕೆ ಬಂದು ನೆಲೆಸಿದರು. ಹಿಟ್ಲರ್ ನ ಮರಣದ ನಂತರ, ಅಮೆರಿಕ ದೇಶದಿಂದ ಯುರೋಪಿಗೆ ೧೯೪೭ರಲ್ಲಿ ಹಿಂತಿರುಗಿ ಬಂದು, ಪೂರ್ವ ಜರ್ಮನಿಯ ಬರ್ಲಿನ್ ನಗರದಲ್ಲಿ ನೆಲೆಗೊಂಡು ೧೯೫೬ರಲ್ಲಿ ಮರಣ ಹೊಂದುವ ತನಕ ರಂಗ ಚಟುವಟಿಕೆಯಲ್ಲಿ ತೊಡಗಿದರು.

ಬ್ರೆಕ್ಟ್ ಅವರು ದೇಶಾಂತರವಾಸಿಯಾಗಿ ಸುಮಾರು ಹದಿನಾಲ್ಕು ವರುಶ ಬೇರೆ ಬೇರೆ ದೇಶಗಳಲ್ಲಿದ್ದರೂ ತಮ್ಮ ಕತೆ, ಕವನ ಮತ್ತು ನಾಟಕಗಳ ಮೂಲಕ ಜನಾಂಗಿಯ ಹಗೆತನದ ಆಡಳಿತದ ದಬ್ಬಾಳಿಕೆಯನ್ನು ಮತ್ತು ಸಂಪತ್ತಿನ ಹಂಚಿಕೆಯಲ್ಲಿರುವ ಅಸಮಾನತೆಯನ್ನು ತೊಲಗಿಸುವಂತಹ ವಿಚಾರಗಳನ್ನು

ಜನಮನದಲ್ಲಿ ಬಿತ್ತುತ್ತ; ದುಡಿಯುವ ಶ್ರಮಜೀವಿಗಳ ಕೊಡುಗೆಯಿಂದ ಮಾನವ ಸಮುದಾಯ ಉಳಿದು ಬೆಳೆದು ಬಾಳುತ್ತಿರುವುದನ್ನು ಚಿತ್ರಿಸುತ್ತ; **"ಸರ್ವರಿಗೂ ಸಮ ಪಾಲು; ಸರ್ವರಿಗೂ ಸಮ ಬಾಳು"** ಎಂಬ ಕಾರ್ಲ್ ಮಾರ್ಕ್ಸ್ ಅವರ ತತ್ವಗಳನ್ನು ಪ್ರತಿಪಾದಿಸುತ್ತ, ಜಗತ್ತಿನಲ್ಲಿರುವ ಇಡೀ ಮಾನವಸಮುದಾಯದ ಒಳಿತಿನ ಬಗ್ಗೆ ಚಿಂತಿಸುತ್ತ ಸದಾಕಾಲ ಕ್ರಿಯಾಶೀಲರಾಗಿದ್ದರು.



# ೧೧. ಜರ್ಮನ್ ಯುದ್ಧದ ಬಾಲಬೋಧೆ

**ಅನುವಾದ: ಶಾ.ಬಾಲುರಾವ್**

ಮೇಲಿನವರು ಹೇಳುತ್ತಾರೆ
ಇದು ಕೀರ್ತಿ ವೈಭವಗಳಿಗೆ ದಾರಿ
ಕೆಳಗಿನವರು ಹೇಳುತ್ತಾರೆ
ಅಲ್ಲ... ಸುಡುಗಾಡಿಗೆ.

**ದೇಶದ ದೊಡ್ಡ ಅಧಿಕಾರದ ಗದ್ದುಗೆಯಲ್ಲಿ ಕುಳಿತಿರುವವರ ಪಾಲಿಗೆ ಯುದ್ಧವೆಂಬುದು ದೇಶಪ್ರೇಮದ ಮಾತಿನ ಅಬ್ಬರಕ್ಕೆ ಕಾರಣವಾದರೆ, ರಣರಂಗದಲ್ಲಿ ಹೋರಾಡುವವರ ಪಾಲಿಗೆ ಸಾವು ನೋವಿನ ಮಸಣವಾಗುತ್ತದೆ ಎಂಬ ಸಂಗತಿಯನ್ನು ಈ ಕವನದಲ್ಲಿ ಹೇಳಲಾಗಿದೆ.**

**ಮೇಲಿನವರು**=ದೇಶದಲ್ಲಿ ದೊಡ್ಡ ಅಧಿಕಾರದಲ್ಲಿರುವ ರಾಜ/ಪ್ರಧಾನಿ/ಸರ್ವಾಧಿಕಾರಿ/ಅಧ್ಯಕ್ಷ; ಕೀರ್ತಿ=ಹೆಸರುವಾಸಿ/ಪ್ರಸಿದ್ಧಿ; ವೈಭವ=ಹಿರಿಮೆ/ಸೊಗಸು;

**ಮೇಲಿನವರು ಹೇಳುತ್ತಾರೆ... ಇದು ಕೀರ್ತಿ ವೈಭವಗಳಿಗೆ ದಾರಿ**=ಹಗೆಯು ದೇಶದ ಗಡಿಯ ಎಲ್ಲೆಯನ್ನು ದಾಟಿ ದೇಶದೊಳಕ್ಕೆ ನುಗ್ಗದಂತೆ ತಡೆಗಟ್ಟುವುದಕ್ಕಾಗಿ; ದೇಶದ ಜನರ ಮಾನ ಪ್ರಾಣ ಸಂಪತ್ತನ್ನು ಕಾಪಾಡುವುದಕ್ಕಾಗಿ; ದೇಶದ ಹೆಸರಾಂತ ಜನಾಂಗದ ಹಿರಿಮೆಯನ್ನು ಎತ್ತಿಹಿಡಿಯುವುದಕ್ಕಾಗಿ ಮತ್ತು ದೇಶದ ಸಂಸ್ಕೃತಿಯನ್ನು ಉಳಿಸುವುದಕ್ಕಾಗಿ ತನ್ನ ಪ್ರಾಣವನ್ನೇ ಪಣವಾಗಿ ಒಡ್ಡಿ

ಹೋರಾಡುವುದು ಪ್ರತಿಯೊಬ್ಬ ದೇಶಪ್ರೇಮಿಯ ಕರ್ತವ್ಯವೆಂದು ಹುರಿದುಂಬಿಸುತ್ತ... ರಣರಂಗದಲ್ಲಿ ಮಡಿದರೆ ವೀರಸ್ವರ್ಗ ದೊರೆಯುತ್ತದೆ ಮತ್ತು ಹುತಾತ್ಮನೆಂಬ ಹೆಸರನ್ನು ಪಡೆದು ಅಮರರಾಗುತ್ತೀರಿ ಎಂದು ಜನಸಮುದಾಯಕ್ಕೆ ಕರೆಯನ್ನು ನೀಡುತ್ತ... ದೇಶದ ರಾಜಕೀಯ ಅಧಿಕಾರದ ದೊಡ್ಡ ಗದ್ದುಗೆಯಲ್ಲಿರುವ ವ್ಯಕ್ತಿಗಳು ಯುವ ಜನಾಂಗವನ್ನು ಯುದ್ಧರಂಗಕ್ಕೆ ದೂಡುತ್ತಾರೆ;

ಇಪ್ಪತ್ತನೆಯ ಶತಮಾನದ ಮೊದಲ ದಶಕಗಳಿಂದ ಜಗತ್ತಿನಲ್ಲಿ ನಡೆಯುತ್ತಿರುವ ಯುದ್ಧಗಳಲ್ಲಿ ದೇಶದ ಉನ್ನತ ಗದ್ದುಗೆಯಲ್ಲಿರುವ ರಾಜಕೀಯ ವ್ಯಕ್ತಿಗಳು ತಾವೇ ನೇರವಾಗಿ ರಣರಂಗದಲ್ಲಿ ಶತ್ರುವಿನ ಎದುರು ಹೋರಾಡಲು ಹೋಗುವುದಿಲ್ಲ. ಯುದ್ಧ ನಡೆಯುತ್ತಿರುವ ಕಾಲದಲ್ಲಿ ರಾಜಕೀಯ ಅಧಿಕಾರದಲ್ಲಿ ರುವವರ ಪ್ರಾಣಕ್ಕೆ ಅಪಾಯ ತಟ್ಟದಂತೆ ಕಾಪಾಡಲು ದೊಡ್ಡ ಮಟ್ಟದ ಕಾವಲುಪಡೆಯೇ ಹಗಲಿರುಳೆನ್ನದೆ ಸಜ್ಜಾಗಿರುತ್ತದೆ;

**ಕೆಳಗಿನವರು**=ರಣರಂಗದಲ್ಲಿ ಹೋರಾಡುವ ಕಾದಾಳುಗಳು. ಪ್ರತಿಯೊಂದು ದೇಶದ ಸೇನೆಯ ಕಾದಾಳುಗಳಲ್ಲಿ ದುಡಿಯುವ ಶ್ರಮಜೀವಿಗಳಾದ ಬಡವರ ಮಕ್ಕಳೇ ದೊಡ್ಡ ಸಂಕೆಯಲ್ಲಿರುತ್ತಾರೆ;

**ಸುಡುಗಾಡು**=ಹೆಣಗಳನ್ನು ಸುಡುವ ಜಾಗ/ಮಸಣ;

**ಕೆಳಗಿನವರು ಹೇಳುತ್ತಾರೆ... ಅಲ್ಲ...ಸುಡುಗಾಡಿಗೆ**=ಯಾವುದೇ ದೇಶದ ಸೇನೆಯ ಮುಂಚೂಣಿಯಲ್ಲಿ ನಿಂತು ಹೋರಾಡುವ ಕಾದಾಳುಗಳಲ್ಲಿ ಬಹುತೇಕ ಮಂದಿ ಬಡತನದ ಬೇಗೆಯಿಂದ ಬೇಯುತ್ತಿರುವ ಕೆಳವರ್ಗಕ್ಕೆ ಸೇರಿದ ಜನರೇ ಹೆಚ್ಚಿನ ಸಂಕೆಯಲ್ಲಿರುತ್ತಾರೆ. ತಮ್ಮ ತಂದೆ-ತಾಯಿ, ಅಣ್ಣ-ತಮ್ಮ, ಅಕ್ಕ-ತಂಗಿ, ಹೆಂಡತಿ-ಮಕ್ಕಳ ಬದುಕನ್ನು ರೂಪಿಸಲೆಂದು ಸಂಬಳದ ಆಸೆಗಾಗಿ ಸೇನೆಯನ್ನು ಸೇರಿರುತ್ತಾರೆ. ಯುದ್ಧ ನಡೆದಾಗ ಯಾವುದೇ ದೇಶದ ಸೈನಿಕನಾಗಿರಲಿ ತನ್ನ ದೇಶಕ್ಕೆ ಆಪತ್ತೆಂದು ತಿಳಿದಿರುವ ಶತ್ರುವನ್ನು ಕೊಲ್ಲುತ್ತಾನೆ ಇಲ್ಲವೇ ಶತ್ರುವಿನಿಂದ ಸಾವು ನೋವಿಗೆ ತಾನೇ ಬಲಿಯಾಗುತ್ತಾನೆ. ದೊಡ್ಡ ಯುದ್ಧಗಳು ನಡೆದಾಗ ಬದುಕಿ ಉಳಿಯುವ ಕಾದಾಳುಗಳಿಗಿಂತ ಸಾವು ಇಲ್ಲವೇ ಅಂಗವಿಕಲರಾಗಿ ನರಳುವುವರೇ ಹೆಚ್ಚಾಗಿರುತ್ತಾರೆ. ಒಬ್ಬ ಕಾದಾಳುವಿನ ಸಾವು ಇಲ್ಲವೇ ಅಂಗವಿಕಲತೆಯು ಅವನ ಇಡೀ ಕುಟುಂಬವನ್ನೇ ಸಂಕಟದ ಮಡುವಿಗೆ ಮುಳುಗಿಸುತ್ತದೆ;

ಈ ಕವನವನ್ನು ಬ್ರೆಕ್ಟ್ ಅವರ ಜೀವನದಲ್ಲಿನ ಕೆಲವು ಪ್ರಸಂಗಗಳ ಹಿನ್ನೆಲೆಯಲ್ಲಿ ನೋಡಬೇಕಾದ ಅಗತ್ಯವಿದೆ. ಬ್ರೆಕ್ಟ್ (೧೮೯೮–೧೯೫೬) ಅವರು ತಮ್ಮ ಜೀವಿತ ಕಾಲದಲ್ಲಿಯೇ ನಡೆದಿದ್ದ ಮೊದಲನೆಯ ಮಹಾಯುದ್ಧ (೧೯೧೪–೧೯೧೯) ಮತ್ತು ಎರಡನೆಯ ಮಹಾಯುದ್ಧ (೧೯೩೯–೧೯೪೫)ಗಳಿಂದ ಉಂಟಾದ ದುರಂತವನ್ನು ಕಣ್ಣಾರೆ ಕಂಡವರು. ಜೀವರಾಶಿಗಳ ನೆಲೆಯಾದ ನಿಸರ್ಗ ಸಂಪತ್ತಿನ, ಮಾನವ ಸಮುದಾಯದ ಕ್ರಿಯಾಶೀಲ ಚಟುವಟಿಕೆಯಿಂದ ನಿರ್ಮಾಣ ಗೊಂಡಿರುವ ಕಟ್ಟಡಗಳ, ಸೇತುವೆಗಳ, ರಸ್ತೆಗಳ, ಅಣೆಕಟ್ಟೆಗಳ, ಜೀವನೋಪಯೋಗಿಯಾದ ವಸ್ತುಗಳ ಮತ್ತು ಮಾನವನ ಬದುಕಿನ ಸರ್ವನಾಶಕ್ಕೆ ಕಾರಣವಾಗುವ ಯುದ್ಧಗಳನ್ನು ಬ್ರೆಕ್ಟ್ ವಿರೋಧಿಸುತ್ತಿದ್ದರು. ಯುದ್ಧಗಳಿಂದ ದುಡಿಯುವ ಶ್ರಮಜೀವಿಗಳಾದ ಶ್ರೀಸಾಮಾನ್ಯರ ಬದುಕು ಹೇಗೆ ಹಸಿವು. ಬಡತನ. ಅಪಮಾನ ಮತ್ತು ಸಾವು ನೋವಿಗೆ ಗುರಿಯಾಗುತ್ತದೆ ಎಂಬುದರ ಬಗ್ಗೆ ಸದಾಕಾಲ ಚಿಂತಿಸುತ್ತಿದ್ದ ಬ್ರೆಕ್ಟ್ ಅವರು ಯುದ್ಧದಿಂದ ಉಂಟಾಗುವ ಸಂಗತಿಗಳನ್ನು ಕುರಿತು ಕೆಲವು ಕವನಗಳನ್ನು ಬರೆದಿದ್ದಾರೆ.

ಅಂತಹ ಕವನಗಳಲ್ಲಿ ಕೆಲವನ್ನು **'ಜರ್ಮನ್ ಯುದ್ಧದ ಬಾಲಬೋಧೆ'** ಎಂಬ ತಲೆಬರಹದಲ್ಲಿ ಅನುವಾದ ಮಾಡಲಾಗಿದೆ. **'ಬಾಲಬೋಧೆ'** ಎಂದರೆ ಮೊದಲನೆಯ ತರಗತಿಯ ಮಕ್ಕಳಿಗೆ ಹೇಳಿಕೊಡುವ ವರ್ಣಮಾಲೆಯ ಪುಸ್ತಕ. **'ಬಾಲಬೋಧೆ'** ಎನ್ನುವ ಪದ ವ್ಯಕ್ತಿಯು ಪಡೆಯಬೇಕಾದ ಮೊದಲ ಅರಿವು ಎಂಬ ರೂಪಕದ ತಿರುಳಿನಲ್ಲಿ ಬಳಕೆಗೊಂಡಿದೆ. ಯೂರೋಪ್ ಪ್ರಾಂತ್ಯವನ್ನೆಲ್ಲಾ ತನ್ನ ವಶಕ್ಕೆ ತೆಗೆದುಕೊಂಡು, ಆರ್ಯನ್ ಜನಾಂಗಕ್ಕೆ ಸೇರಿದ ಜರ್ಮನ್ನರೇ ಬಹುದೊಡ್ಡ ಶಕ್ತಿಯಾಗಿ ರೂಪುಗೊಂಡು ಜಗತ್ತೆಲ್ಲವನ್ನೂ ನಿಯಂತ್ರಿಸುವಂತಾಗ ಬೇಕು ಎಂಬ ಸಂಕಲ್ಪತೊಟ್ಟಿದ್ದ ನಿರಂಕುಶಾಧಿಕಾರಿ ಅಡಾಲ್ಫ್ ಹಿಟ್ಲರನ ಕಾಲದಲ್ಲಿ ನಡೆಯುತ್ತಿರುವ ಯುದ್ಧದಿಂದ ಮಾನವ ಸಮುದಾಯಕ್ಕೆ ದೊಡ್ಡ ಪ್ರಮಾಣದಲ್ಲಿ ಕೇಡು ಮತ್ತು ದುರಂತ ಉಂಟಾಗುತ್ತಿದೆ ಎಂಬ ಅರಿವನ್ನು ಮೊದಲ ಪಾಠವನ್ನಾಗಿ ಎಲ್ಲರೂ ತಿಳಿದುಕೊಂಡಿರಬೇಕು ಎಂಬ ತಿರುಳಿನಲ್ಲಿ **'ಜರ್ಮನ್ ಯುದ್ಧದ ಬಾಲಬೋಧೆ'** ಎಂಬ ತಲೆಬರಹ ಬಳಕೆಗೊಂಡಿದೆ.

ಬ್ರೆಕ್ಟ್ ಅವರು ಕ್ರಿ.ಶ.೧೯೧೭ರಲ್ಲಿ ಹತ್ತೊಂಬತ್ತು ವರುಶದ ಯುವಕನಾಗಿದ್ದಾಗ ಮ್ಯೂನಿಕ್ ವಿಶ್ವವಿದ್ಯಾಲಯದಲ್ಲಿ ವೈದ್ಯಕೀಯ ವಿಜ್ಞಾನವನ್ನು ಓದಲೆಂದು ಕಾಲೇಜಿಗೆ ಸೇರುತ್ತಾರೆ. ಆ ವೇಳೆಗಾಗಲೇ ೧೯೧೪ ರಲ್ಲಿ ಆರಂಭಗೊಂಡಿದ್ದ ಮೊದಲನೆಯ ಮಹಾಯುದ್ಧದ ಹೋರಾಟ ಯುರೋಪಿನ ಎಲ್ಲೆಡೆಯಲ್ಲಿ

ಭೀಕರವಾಗಿ ನಡೆಯುತ್ತಿರುತ್ತದೆ. ೧೯೧೮ರಲ್ಲಿ ಜರ್ಮನಿಯ ಸೇನಾ ಶಿಬಿರವೊಂದರಲ್ಲಿ ಬ್ರೆಕ್ಟ್ ಅವರನ್ನು ವೈದ್ಯಕೀಯ ಪರಿಚಾರಕನಾಗಿ ಕಡ್ಡಾಯ ಸೇವೆಗೆ ನೇಮಿಸಲಾಗುತ್ತದೆ. ಯುದ್ಧರಂಗದಲ್ಲಿ ಮದ್ದುಗುಂಡು ಮತ್ತು ಬಾಂಬಿನ ದಾಳಿಗೆ ಒಳಗಾಗಿ ಚಿದ್ರಚಿದ್ರಗೊಂಡ ದೇಹದ ಗಾಯಾಳುಗಳನ್ನು ಆಸ್ಪತ್ರೆಯಲ್ಲಿ ಉಪಚರಿಸುವ ಸನ್ನಿವೇಶದಲ್ಲಿ ಯುದ್ಧದಿಂದ ಉಂಟಾಗುವ ಎದೆಬಿರಿಯುವಂತಹ ನೋಟಗಳನ್ನು ಬ್ರೆಕ್ಟ್ ಕಾಣುತ್ತಾರೆ. ತಮ್ಮ ಅನುಭವವನ್ನು ಈ ರೀತಿ ಒಂದು ಕಡೆ ಹೇಳಿಕೊಂಡಿದ್ದಾರೆ.

**"ಬಲವಂತದ ಮಿಲಿಟರಿ ಸೇವೆಗೆಂದು ನನ್ನನ್ನು ಆಸ್ಪತ್ರೆಯ ಕೆಲಸಕ್ಕೆ ಹಾಕಿದರು. ಅಲ್ಲಿ ನಾನು ಗಾಯಗಳನ್ನು ತೊಳೆದು ಇಲಾಜು ಮಾಡುತ್ತಿದ್ದೆ. ಅಯೋಡಿನ್ ಬಳಿದು ಡ್ರೆಸ್ ಮಾಡುತ್ತಿದ್ದೆ. ಎನಿಮಾ ಕೊಡುತ್ತಿದ್ದೆ. ರಕ್ತದಾನ (Blood Transfusion) ನಡೆಸುತ್ತಿದ್ದೆ. ಶಸ್ತ್ರವೈದ್ಯನು ಬ್ರೆಕ್ಟ್... ನೋಡಿಲ್ಲಿ ಈ ರೋಗಿಯ ರೋಗಿಯ ಕಾಲು ಕತ್ತರಿಸು ಅಂದಾಗ ನಾನು... ಆಗಲಿ ಸ್ವಾಮಿ ಎಂದು ಹೇಳಿ, ಆ ಕಾಲನ್ನು ತುಂಡರಿಸಿ ಬಿಸಾಡುತ್ತಿದ್ದೆ. ಡಾಕ್ಟರು ಈತನ ತಲೆಚಿಪ್ಪನ್ನು ಗರಗಸದಿಂದ ಕೊರೆದು ಸಿದ್ಧಪಡಿಸು ಎಂದು ಆಜ್ಞಾಪಿಸಿದಾಗ, ನಾನು ಕೂಡಲೆ ತಲೆ ಬುರುಡೆಯನ್ನು ಕೊರೆದು ಒಳಗಿನ ಮೆದುಳನ್ನು ಮುಟ್ಟಾಡುತ್ತಿದ್ದೆ. ಕಾದಾಳುಗಳನ್ನು ಬಹು ತುರ್ತಾಗಿ ದುರಸ್ತುಮಾಡಿ ಪುನಃ ಅವರನ್ನು ರಣರಂಗಕ್ಕೆ ರವಾನೆ ಮಾಡುತ್ತಿದ್ದುದನ್ನು ಆಗ ನಾನು ಕಣ್ಣಾರೆ ಕಂಡೆ."** (ಎಚ್.ಕೆ. ರಾಮಚಂದ್ರ ಮೂರ್ತಿ, ೧೯೭೮ ಬ್ರೆಕ್ಟ್) ಇಂತಹ ಅತಿ ಭೀಕರವಾದ ನೋಟಗಳನ್ನು ಕಂಡಿದ್ದ ಬ್ರೆಕ್ಟ್ ಅವರಿಗೆ ಯುದ್ಧವೆಂಬುದು ಮಾನವ ಸಮುದಾಯಕ್ಕೆ ಒಂದು ಶಾಪ ಎಂಬುದು ಚೆನ್ನಾಗಿ ಮನದಟ್ಟಾಗಿತ್ತು.

ರಣರಂಗದಲ್ಲಿ ಪೆಟ್ಟುತಿಂದು ಗಾಯಾಳುಗಳಾಗಿ ಸೇನಾಶಿಬಿರದಲ್ಲಿ ನರಳುತ್ತಿದ್ದವರಲ್ಲಿ ಬಹುತೇಕ ಮಂದಿ ಜರ್ಮನಿಯ ದುಡಿಯುವ ಶ್ರಮಜೀವಿಗಳ ಬಡಕುಟುಂಬಗಳಿಂದ ಬಂದಿದ್ದ ವ್ಯಕ್ತಿಗಳಾಗಿದ್ದರು. ಇದೇ ರೀತಿ ಯಾವುದೇ ದೇಶಗಳ ನಡುವೆ ಯುದ್ಧಗಳು ನಡೆದಾಗ ಸಾವು ನೋವಿಗೆ ಗುರಿಯಾಗುವವರು ಆಯಾಯ ದೇಶಗಳ ಬಡಜನರೇ ಎಂಬ ವಾಸ್ತವವನ್ನು ಬ್ರೆಕ್ಟ್ ಅವರು ಈ ಕವನದ ಮೂಲಕ ನಿರೂಪಿಸಿದ್ದಾರೆ.

ಎರಡು ಮಹಾಯುದ್ಧದಲ್ಲಿ ಪಾಲ್ಗೊಂಡ ದೇಶಗಳು:

**ಮೊದಲನೆಯ ಮಹಾಯುದ್ಧ–(೧೯೧೪–೧೯):** ಇಂಗ್ಲೆಂಡ್, ಅಮೆರಿಕ, ಫ್ರಾನ್ಸ್, ರಶ್ಯಾ, ಇಟಲಿ ದೇಶಗಳು ಒಂದು ಕಡೆ; ಮತ್ತೊಂದು ಕಡೆ ಜರ್ಮನಿ,

ಆಸ್ಟ್ರೋ ಹಂಗೇರಿಯ, ಬಲ್ಗೇರಿಯ ದೇಶಗಳು;

**ಎರಡನೆಯ ಮಹಾಯುದ್ಧ–(೧೯೩೯–೧೯೪೫):** ಇಂಗ್ಲೆಂಡ್, ಅಮೆರಿಕ, ಫ್ರಾನ್ಸ್, ರಶ್ಯಾ ದೇಶಗಳು ಒಂದು ಕಡೆ; ಮತ್ತೊಂದು ಕಡೆ ಜರ್ಮನಿ, ಇಟಲಿ ಮತ್ತು ಜಪಾನ್ ದೇಶಗಳು;



# ೧೨. ದೊಡ್ಡೋರ ಬಗ್ಗೆ ನಾ ಮಾತಾಡೋಲ್ಲಪ್ಪ

**ಅನುವಾದ: ಕೆ.ಫಣಿರಾಜ್**

ತೈಮೂರನಿಗೆ ಲೋಕ ಗೆಲ್ಲುವಾಸೆ ಇತ್ತಂತೆ
ಅವನ ಆಸೆ ನನಗರ್ಥವಾಗೋಲ್ಲಪ್ಪ
ಒಂದು ಗಡಿಗೆ ಹೆಂಡ ಕುಡಿದು
ಲೋಕ ಮರೆತುಬಿಡಬೋದು
ಹಾಗಂತ
ಅಲೆಗ್ಸಾಂಡರನ ಬಗ್ಗೆ ನಾನು ಮಾತಾಡೋಲ್ಲಪ್ಪ

ನಾನು ಹೇಳೋದಿಷ್ಟೇ
ನಾವು ಹೊಗಳಿ ಅಟ್ಟಕ್ಕೇರ್ಸೋ ಮಹಾನ್ ಪುರುಷರು
ನಮ್ಮ ದೈನಂದಿನ ಬವಣೆಗಳನ್ನು ನೀಗಿಸೋರಲ್ಲ

ಮಹಾವೀರರು
ಹಂಡೆ ಬೆವರು ಸುರಿಸಿರ್ಬೋದು ಕಣ್ರೀ
ಆದ್ರೆ ಅವ್ರು
ಸ್ವಂತದ ಕಾಲ ಮೇಲೆ ನಿಂತದ್ದಿಲ್ಲ
ಸೇದಿ ಕುಡಿದು ದಕ್ಕಿಸಿಕೊಂಡವರಲ್ಲ
ಎದೆಗೊರಗಿದ ಇನಿಯಳ ರಮಿಸಿದಂಥೋರಲ್ಲ

ಇಂಥೋರ ತಾಕತ್ತು
ಅಷ್ಟಕ್ಕಷ್ಟೇ ಇರಬೇಕು ಕಣ್ರೀ.

**ಹರಿತವಾದ ಹತಾರಗಳಿಂದ ಸಜ್ಜಾಗಿರುವ ಸೇನೆಯ ಬಲದ ಮೂಲಕ ಜನರನ್ನು ಸಾವು ನೋವಿಗೆ ಗುರಿಮಾಡಿ ಜಗತ್ತನ್ನು ಗೆಲ್ಲಲು ಹೊರಟವರು ಮಹಾನ್ ಕ್ರೂರಿಗಳೇ ಹೊರತು ಮಹಾವೀರರಲ್ಲ ಎಂಬ ಸಂಗತಿಯನ್ನು ಈ ಕವನದಲ್ಲಿ ಹೇಳಲಾಗಿದೆ.**

ದೊಡ್ಡೋರ=ದೊಡ್ಡವರನ್ನು; ಬಗ್ಗೆ=ಕುರಿತು; ನಾ=ನಾನು; ಮಾತಾಡೋಲ್ಲಪ್ಪ =ಮಾತನಾಡುವುದಿಲ್ಲ;

**ತೈಮೂರ್ ಲಂಗ್ (ಕ್ರಿ.ಶ.೧೩೩೬–೧೪೦೫).** ಈತ ಹುಟ್ಟಿದ್ದು ರಶ್ಯಾ ದೇಶದ ಕೆಶ್ ಎಂಬ ಹಳ್ಳಿಯಲ್ಲಿ. ಜಗತ್ತನ್ನೇ ಗೆಲ್ಲಬೇಕೆಂಬ ದೊಡ್ಡ ಆಸೆಯನ್ನು ಹೊಂದಿದ್ದ ಈತ ಮೊದಲು ಒಂದು ಸಣ್ಣ ಪ್ರಾಂತ್ಯದ ಪಾಳೆಯಗಾರನಾಗಿದ್ದ. ಕ್ರಿ.ಶ.೧೩೮೩ ರಲ್ಲಿ ಪರ್ಶಿಯ ದೇಶದ ಮೇಲೆ ದಂಡಯಾತ್ರೆಯನ್ನು ಶುರುಮಾಡಿದ ತೈಮೂರ್ ಲಂಗನು ದೊಡ್ಡ ಸೇನೆಯೊಡನೆ ಅನೇಕ ದೇಶಗಳನ್ನು ಗೆದ್ದು, ಕ್ರಿ.ಶ.೧೩೯೮ ರಲ್ಲಿ ಇಂಡಿಯಾ ದೇಶದ ಮೇಲೆ ದಂಡೆತ್ತಿ ಬಂದು ದೆಹಲಿಯನ್ನು ಕೊಳ್ಳೆಹೊಡೆದು ಹಿಂತಿರುಗಿದ್ದ.

ಲೋಕ=ಜಗತ್ತು/ಪ್ರಪಂಚ; ಗೆಲ್ಲುವ+ಆಸೆ; ಗೆಲ್ಲು=ಜಯಿಸು; ನನಗೆ+ಅರ್ಥ+ ಆಗೋಲ್ಲಪ್ಪ; ಆಗೋಲ್ಲಪ್ಪ=ಆಗುವುದಿಲ್ಲ;

**ಅವನ ಆಸೆ ನನಗರ್ಥವಾಗೋಲ್ಲಪ್ಪ=** ಲೋಕವನ್ನೇ ಗೆಲ್ಲಬೇಕೆಂಬ ತೈಮೂರನ ಆಸೆಯ ಅಂತಿಮ ಗುರಿಯೇನು ಎಂಬುದೇ ನನಗೆ ತಿಳಿಯುವುದಿಲ್ಲ. ಏಕೆಂದರೆ ಈ ರೀತಿ ಜಗತ್ತನ್ನು ಗೆಲ್ಲಲು ಹೊರಟಾಗ ಹೆಜ್ಜೆಹೆಜ್ಜೆಗೂ ಜನರನ್ನು ಹಿಂಸೆಗೆ ಗುರಿಮಾಡುತ್ತ ಮುಂದೆ ಸಾಗಬೇಕು. ಗೆದ್ದ ನಂತರ ಅವನೇನು ಈ ಜಗತ್ತಿನಲ್ಲಿ ಚಿರಂಜೀವಿಯಾಗಿ ಇರುವುದಿಲ್ಲ;

ಗಡಿಗೆ=ಮಣ್ಣಿನ ಕೊಡ/ಮಣ್ಣಿನ ಬಿಂದಿಗೆ; ಹೆಂಡ=ಕುಡಿದಾಗ ಮತ್ತನ್ನು ಉಂಟು ಮಾಡುವ ಪಾನೀಯ;

**ಒಂದು ಗಡಿಗೆ ಹೆಂಡ ಕುಡಿದು ಲೋಕ ಮರೆತುಬಿಡಬೋದು**=ಈ ನುಡಿಗಳು ರೂಪಕದ ತಿರುಳಿನಲ್ಲಿ ಬಳಕೆಯಾಗಿವೆ. ಹೆಂಡವನ್ನು ಕುಡಿದು ಅಮಲೇರಿದ ವ್ಯಕ್ತಿಯು ಇಡೀ ಜಗತ್ತೇ ತನ್ನದೆಂಬಂತೆ ತಿಳಿದುಕೊಂಡು ಆನಂದಪಡುವ ಒಳಮಿಡಿತಗಳನ್ನು ಹೊಂದಿರುತ್ತಾನೆ;

ಹಾಗಂತ=ಅದೇ ರೀತಿಯಲ್ಲಿ;

**ಅಲೆಗ್ಸಾಂಡರ್ ( ಕ್ರಿ.ಪೂ.೩೫೬–೩೨೩) 'ಅಲೆಗ್ಸಾಂಡರ್ ದಿ ಗ್ರೇಟ್'** ಎಂದು ಹೆಸರುವಾಸಿಯಾಗಿರುವ ಅಲೆಗ್ಸಾಂಡರನು ಗ್ರೀಸ್ ದೇಶದ ಒಬ್ಬ ಮಹಾನ್ ದಂಡನಾಯಕ. ಗ್ರೀಸ್ ದೇಶಕ್ಕೆ ಸೇರಿದ ಮಸೆಡೊನಿಯ ರಾಜ್ಯದ ರಾಜ. ಅಲೆಗ್ಸಾಂಡರನು ತನ್ನ ಜೀವಿತ ಕಾಲದಲ್ಲಿ ಬಹು ದೊಡ್ಡ ಸಾಮ್ರಾಜ್ಯವನ್ನು ಕಟ್ಟಿದನು. ಇವನ ದಂಡಯಾತ್ರೆಯು ಗ್ರೀಸಿನಿಂದ ಹಿಡಿದು ಇಂಡಿಯಾ ದೇಶದ ಹಿಮಾಲಯದ ತಪ್ಪಲಿನವರೆಗೂ ವಿಸ್ತರಿಸಿತ್ತು. ಇಡೀ ಜಗತ್ತನ್ನೇ ಗೆದ್ದು ಎಲ್ಲೆಲ್ಲಿಯೂ ಗ್ರೀಕರ ನಾಗರಿಕತೆಯನ್ನು ನೆಲೆಗೊಳಿಸಬೇಕೆಂಬುದು ಇವನ ದೊಡ್ಡ ಆಸೆಯಾಗಿತ್ತು. ಆದರೆ ಇಂಡಿಯಾ ದೇಶದ ಮೇಲಣ ದಂಡಯಾತ್ರೆಯ ನಂತರ ಸಿಂಧೂ ನದಿಯನ್ನು ದಾಟಿ ಕ್ರಿ.ಪೂ.೩೨೫ ರಲ್ಲಿ ಸೂಸ್ ಎಂಬ ಪಟ್ಟಣವನ್ನು ಸೇರಿದ. ಅಲ್ಲಿಂದ ಬ್ಯಾಬಿಲೋನ್ ನಗರಕ್ಕೆ ಹೋದಾಗ, ಜ್ವರದ ಕಾಯಿಲೆಗೆ ಗುರಿಯಾಗಿ ಕೇವಲ ೩೨ ನೆಯ ವಯಸ್ಸಿನಲ್ಲಿಯೇ ಸಾವನ್ನಪ್ಪಿದನು.

ಬಗ್ಗೆ=ಕುರಿತು; ಮಾತಾಡೋಲ್ಲಪ್ಪ=ಮಾತನಾಡುವುದಿಲ್ಲ;

**ಹಾಗಂತ ಅಲೆಗ್ಸಾಂಡರನ ಬಗ್ಗೆ ನಾನು ಮಾತಾಡೋಲ್ಲಪ್ಪ**=ಅದೇ ರೀತಿಯಲ್ಲಿ ಜಗತ್ತಿನಲ್ಲಿಯೇ ಹೆಸರುವಾಸಿಯಾಗಿರುವ ಅಲೆಗ್ಸಾಂಡರನನ್ನು ಕುರಿತು ನಾನು ಏನನ್ನೂ ಮಾತನಾಡುವುದಿಲ್ಲ; ಏಕೆಂದರೆ ಅಲೆಗ್ಸಾಂಡರ್ ಮತ್ತು ತೈಮೂರ್ ನಡೆಸಿದ ದಂಡಯಾತ್ರೆಗಳಿಂದ ರಣರಂಗದಲ್ಲಿ ಸಾವಿರಾರು ಮಂದಿ ಸಾವುನೋವು ಗಳಿಗೆ ಬಲಿಯಾಗುತ್ತಿದ್ದರು. ಇವರ ಸೈನಿಕರು ತಾವು ಗೆದ್ದು ವಶಪಡಿಸಿಕೊಂಡ ಪ್ರಾಂತ್ಯಗಳಲ್ಲಿದ್ದ ಗಂಡಸರು ಮತ್ತು ಮಕ್ಕಳನ್ನು ಕೊಂದು, ಹೆಂಗಸರ ಮೇಲೆ ಅತ್ಯಾಚಾರವನ್ನು ನಡೆಸಿ, ಅವರ ಒಡವೆ ವಸ್ತುಗಳನ್ನು ಲೂಟಿ ಮಾಡಿ, ಊರಿಗೆ ಬೆಂಕಿಯನ್ನೊಡ್ಡುತ್ತಿದ್ದರು. ಈ ರೀತಿ ಮಾನವ ಸಮುದಾಯದ ಸಂಕಟಕ್ಕೆ ಕಾರಣ ವಾಗುವ ಇಂತಹವರನ್ನು ಮಹಾವೀರರೆಂದು ಕರೆಯದೆ, ಮಹಾಕ್ರೂರಿಗಳೆಂದು ಗುರುತಿಸಬೇಕು ಎಂಬ ಆಶಯವನ್ನು ಈ ನುಡಿಗಳು ಹೊಂದಿವೆ;

**ನಾನು ಹೇಳೋದಿಷ್ಟೆ**=ನಾನು ಹೇಳುತ್ತಿರುವುದು ಒಂದು ಸರಳವಾದ ಸಂಗತಿ; ಹೊಗಳು=ಕೊಂಡಾಡು/ಸ್ತುತಿಸು/ಬಣ್ಣಿಸು; ಅಟ್ಟಕ್ಕೆ+ಏರ್ಸೋ; ಏರ್ಸೋ= ಏರಿಸುವ;

**ಹೊಗಳಿ ಅಟ್ಟಕ್ಕೇರಿಸು**=ಇದೊಂದು ನುಡಿಗಟ್ಟು. ಯಾವುದೇ ವ್ಯಕ್ತಿಯ ನಡೆನುಡಿಯನ್ನು ಇಂಪಾದ ಪದಗಳಲ್ಲಿ ಬಣ್ಣಿಸುತ್ತ, ಅವರನ್ನು ಎಲ್ಲರಿಗಿಂತ ದೊಡ್ಡವರೆಂದು ಪರಿಗಣಿಸುವುದು; ಮಹಾನ್=ದೊಡ್ಡದು/ಅತ್ಯುತ್ತಮವಾದುದು; ದೈನಂದಿನ=ದಿನನಿತ್ಯದ/ಪ್ರತಿದಿನದ; ಬವಣೆ=ತೊಂದರೆ/ಸಂಕಟ;

**ನಮ್ಮ ದೈನಂದಿನ ಬವಣೆಗಳು**=ಜಗತ್ತಿನಲ್ಲಿರುವ ನಾವೆಲ್ಲರೂ ಅನ್ನ, ಬಟ್ಟೆ, ವಸತಿ, ವಿದ್ಯೆ, ಉದ್ಯೋಗ, ಆರೋಗ್ಯವನ್ನು ಪಡೆದು ನೆಮ್ಮದಿಯಿಂದ ಜೀವನವನ್ನು ನಡೆಸಲು ಹಂಬಲಿಸುತ್ತಿರುತ್ತೇವೆ. ಆದರೆ ಇವು ಎಲ್ಲರಿಗೂ ಸಾಕಾಗುವಷ್ಟು ದೊರೆಯದೆ ಜಗತ್ತಿನ ಜನಸಮುದಾಯದಲ್ಲಿ ಬಹುತೇಕ ಮಂದಿ ಪ್ರತಿನಿತ್ಯ ಪರಿತಪಿಸುತ್ತಿದ್ದಾರೆ;

ನೀಗಿಸು=ಪರಿಹರಿಸು/ನಿವಾರಿಸು/ಇಲ್ಲದಂತೆ ಮಾಡು;

**ನಾವು ಹೊಗಳಿ ಅಟ್ಟಕ್ಕೇರ್ಸೋ ಮಹಾನ್ ಪುರುಷರು ನಮ್ಮ ದೈನಂದಿನ ಬವಣೆಗಳನ್ನು ನೀಗಿಸೋರಲ್ಲ**=ಮಹಾವ್ಯಕ್ತಿಗಳೆಂದು ನಾವು ಹೊಗಳಿ ಕೊಂಡಾಡುವ ತೈಮೂರ್ ಮತ್ತು ಅಲೆಕ್ಸಾಂಡರ್ ಅಂತಹವರು ಜಗತ್ತಿನಲ್ಲಿರುವ ಜನರ ದಿನನಿತ್ಯದ ಸಂಕಟಗಳನ್ನು ಪರಿಹರಿಸುವಂತಹವರಲ್ಲ. ಜಗತ್ತಿನ ಜನಸಮುದಾಯಕ್ಕೆ ನೋವನ್ನು ಕೊಡುವವರು;

ಹಂಡೆ=ಲೋಹದ ದೊಡ್ಡ ಪಾತ್ರೆ;

**ಹಂಡೆ ಬೆವರು ಸುರಿಸಿರ್ಬೋದು**=ಇದೊಂದು ರೂಪಕ. ದಂಡಯಾತ್ರೆಯನ್ನು ಮಾಡುವಾಗ ತುಂಬಾ ಅಡೆತಡೆಗಳನ್ನು ಎದುರಿಸಿ ಕೆಚ್ಚು, ಪರಾಕ್ರಮ ಮತ್ತು ಪರಿಶ್ರಮದಿಂದ ಜಯವನ್ನು ಪಡೆದಿರಬಹುದು;

**ಸ್ವಂತ ಕಾಲ ಮೇಲೆ ನಿಲ್ಲು**=ವ್ಯಕ್ತಿಯು ತನ್ನೊಬ್ಬನ ಪರಿಶ್ರಮದಿಂದಲೇ ಜೀವನದಲ್ಲಿ ತಾನು ಅಂದುಕೊಂಡ ಗುರಿಯನ್ನು ಮುಟ್ಟುವುದು;

**ಮಹಾವೀರರು ಹಂಡೆ ಬೆವರು ಸುರಿಸಿರ್ಬೋದು ಕಣ್ರೀ. ಆದ್ರೆ ಅವ್ರು ಸ್ವಂತದ ಕಾಲ ಮೇಲೆ ನಿಂತದ್ದಿಲ್ಲ**=ಮಹಾವೀರರೆಂದು ಹೆಸರು ಪಡೆದವರೆಲ್ಲರೂ ಸೇನೆಯಲ್ಲಿರುವ ಸಾವಿರಾರು ಮಂದಿ ಹೋರಾಟಗಾರರ ಬಲಿದಾನದಿಂದ ದೊಡ್ಡ ದೊಡ್ಡ ಜಯಗಳನ್ನು ಪಡೆದು ದೇಶ ವಿದೇಶಗಳನ್ನು ಗೆದ್ದಿದ್ದಾರೆಯೇ ಹೊರತು, ತಮ್ಮೊಬ್ಬರ ಶಕ್ತಿಯಿಂದಲೇ ಗೆದ್ದಿಲ್ಲ;

ಸೇದು=ಬೀಡಿ ಸಿಗರೇಟು ಮುಂತಾದವನ್ನು ಬಳಸುವುದು; ಕುಡಿದು=ಮಾದಕ ಪಾನೀಯಗಳನ್ನು ಸೇವಿಸುವುದು; ದಕ್ಕಿಸಿಕೊಂಡವರು+ಅಲ್ಲ; ದಕ್ಕು=ದೊರಕು/ಸಿಕ್ಕು/ಅರಗು; ದಕ್ಕಿಸುಕೊಂಡವರು=ಅರಗಿಸಿಕೊಂಡವರು/ತಮ್ಮದನ್ನಾಗಿ ಮಾಡಿಕೊಂಡವರು;

**ಸೇದಿ ಕುಡಿದು ದಕ್ಕಿಸಿಕೊಂಡವರಲ್ಲ**=ಮಹಾವೀರರೆಂದು ಹೆಸರುವಾಸಿಯಾದ

ಇವರೆಲ್ಲರೂ ಜಗತ್ತಿನಲ್ಲಿ ಕೋಟಿಗಟ್ಟಲೆ ಜನರು ತಮ್ಮ ನಿತ್ಯ ಜೀವನದಲ್ಲಿ ಬೀಡಿ ಸಿಗರೇಟುಗಳನ್ನು ಸೇದುತ್ತ, ಮಾದಕ ಪಾನೀಯಗಳನ್ನು ಕುಡಿಯುತ್ತ ಪಡೆಯುವ ಸರಳವಾದ ಆನಂದವನ್ನಾಗಲಿ ಇಲ್ಲವೇ ನೆಮ್ಮದಿಯನ್ನಾಗಿ ಪಡೆದವರಲ್ಲ;

ಎದೆಗೆ+ಒರಗಿದ; ಒರಗು=ನೆಮ್ಮು/ಮಲಗು; ಇನಿಯಳು=ಪ್ರಿಯತಮೆ/ ಒಲಿದವಳು; ರಮಿಸಿದಂಥೋರ್+ಅಲ್ಲ; ರಮಿಸು=ಆನಂದಪಡಿಸು;

**ಎದೆಗೊರಗಿದ ಇನಿಯಳ ರಮಿಸಿದಂಥೋರಲ್ಲ**=ಒಲವು ನಲಿವಿನಿಂದ ಬಳಿಸಾರಿ ಬಂದು ಎದೆಯ ಮೇಲೆ ಒರಗಿದ ಇನಿಯಳನ್ನು ಪ್ರೀತಿಯಿಂದ ಮುದ್ದಾಡಿ, ಅವಳೊಡನೆ ಜತೆಗೂಡಿ ಆನಂದಪಡುವಂತಹ ನಡೆನುಡಿಯನ್ನು ಹೊಂದಿಲ್ಲದವರು. ಅಂದರೆ ಮಾನವ ಸಹಜವಾದ ಕಾಮ ಪ್ರೇಮದ ಒಳಮಿಡಿತಗಳನ್ನೇ ಕಡೆಗಣಿಸಿದವರು;

ಇಂಥೋರ=ಇಂತಹವರ/ಮಾನವ ಸಹಜವಾಗಿ ನಡೆದುಕೊಳ್ಳದೆ ಮಾನವ ಸಮುದಾಯದ ಬದುಕನ್ನೇ ನಾಶಮಾಡವವರ; ತಾಕತ್ತು=ಕಸುವು/ಶಕ್ತಿ/ಬಲ; ಅಷ್ಟಕ್ಕಷ್ಟೇ=ದೊಡ್ಡದಾಗಿ ಹೇಳಿಕೊಳ್ಳುವಂತಹುದಲ್ಲ/ಅತಿ ಸಾಮಾನ್ಯವಾದುದು;

**ಇಂಥೋರ ತಾಕತ್ತು ಅಷ್ಟಕ್ಕಷ್ಟೇ ಇರಬೇಕು ಕಣ್ರೇ**=ಈ ನುಡಿಗಳು ರೂಪಕದ ತಿರುಳಿನಲ್ಲಿ ಬಳಕೆಗೊಂಡಿವೆ. ಮಹಾವೀರರೆಂದು ಹೆಸರನ್ನು ಪಡೆದವರು ಬಹಿರಂಗದಲ್ಲಿ ಮಹಾಬಲಶಾಲಿಗಳಂತೆ ಕಂಡುಬಂದರೂ, ಅಂತರಂಗದಲ್ಲಿ ಮಾನವ ಸಹಜವಾದ ಪ್ರೀತಿ,ಕರುಣೆ ಮತ್ತು ಗೆಳೆತನದ ಒಳಮಿಡಿತಗಳಿಲ್ಲದ ದುರ್ಬಲರು. ಸಹಮಾನವರೊಡನೆ ಜತೆಗೂಡಿ ಒಲವು ನಲಿವು ನೆಮ್ಮದಿಯಿಂದ ಬಾಳಲಾರದವರು;

ಸಹಮಾನವರನ್ನು ಕೊಲ್ಲುವವನು ದೊಡ್ಡವನಲ್ಲ; ಸಹಮಾನವರೊಡನೆ ಜತೆಗೂಡಿ ನೆಮ್ಮದಿಯಿಂದ ಬಾಳುವವನು ದೊಡ್ಡವನು ಎಂಬ ಸಂದೇಶವನ್ನು ಈ ಕವನ ಹೇಳುತ್ತಿದೆ.



# ೧೩. ನಿಮ್ಮ ಮಾತು ನಿಮಗೂ ಕೇಳಲಿ

**ಅನುವಾದ: ಕೆ.ಫಣಿರಾಜ್**

ಯಾವಾಗಲೂ ನೀವೇ ಸರಿ ಎನ್ನದಿರಿ ಗುರುವೇ
ಶಿಷ್ಯಂದಿರಿಗೆ ಅದು ಅರಿವಾಗಲಿ ಬಿಡಿ
ಸತ್ಯವನ್ನು ಒತ್ತಿ ತುರುಕುತ್ತಿರೇಕೆ
ಅದರಿಂದ್ಯಾರಿಗೂ ಒಳಿತಿಲ್ಲ
ನಿಮ್ಮ ಮಾತುಗಳು ನಿಮಗೂ ಕೇಳಲಿ ಗುರುವೇ.

**ಯಾವುದೇ ವ್ಯಕ್ತಿಯು ತಾನು ಹೇಳುತ್ತಿರುವ ವಿಚಾರಗಳನ್ನು ಇತರರು ಒರೆಹಚ್ಚಿ ನೋಡಿ, ಅದರಲ್ಲಿರುವ ನಿಜ ಇಲ್ಲವೇ ಸುಳ್ಳನ್ನು; ಸರಿ ಇಲ್ಲವೇ ತಪ್ಪನ್ನು; ವಾಸ್ತವ ಇಲ್ಲವೇ ಕಟ್ಟುಕತೆಯನ್ನು ತಾವಾಗಿಯೇ ಅರಿತುಕೊಳ್ಳುವುದಕ್ಕೆ ಅವಕಾಶವನ್ನು ನೀಡಬೇಕೆ ಹೊರತು, ತಾನು ಹೇಳುತ್ತಿರುವುದೇ ಸರಿಯೆಂದು ಒತ್ತಾಯ ಮಾಡಬಾರದು ಎಂಬ ಸಂಗತಿಯನ್ನು ಈ ಕವನದಲ್ಲಿ ಹೇಳಲಾಗಿದೆ.**

ಗುರು=ತನ್ನ ಬಳಿ ಬಂದ ವ್ಯಕ್ತಿಗಳಿಗೆ ಲೋಕದ ಬಗ್ಗೆ ಅರಿವನ್ನು ನೀಡಿ, ಅವರ ವ್ಯಕ್ತಿತ್ವವನ್ನು ಒಳ್ಳೆಯ ರೀತಿಯಲ್ಲಿ ರೂಪಿಸುವವನು; ಶಿಷ್ಯ=ವಿದ್ಯೆಯನ್ನು ಕಲಿಯಲೆಂದು ಗುರುವಿನ ಬಳಿಗೆ ಬಂದಿರುವ ವ್ಯಕ್ತಿ/ಗುಡ್ಡ; ಅದು=ಗುರು ಹೇಳಿರುವ ವಿಚಾರ; ಅರಿವು+ಆಗಲಿ; ಅರಿ=ತಿಳಿ/ಗ್ರಹಿಸು; ಅರಿವು=ತಿಳುವಳಿಕೆ;

**ಶಿಷ್ಯಂದಿರಿಗೆ ಅದು ಅರಿವಾಗಲಿ ಬಿಡಿ**=ನೀವು ಹೇಳಿರುವ ವಿಚಾರಗಳ ಬಗ್ಗೆ

ಸ್ವತಂತ್ರವಾಗಿ ಆಲೋಚಿಸಿ, ತಮ್ಮದೇ ಆದ ನಿಲುವನ್ನು ಹೊಂದಲು ನಿಮ್ಮ ಗುಡ್ಡರಿಗೆ ಅವಕಾಶವನ್ನು ಕಲ್ಪಿಸಿಕೊಡಿ;

ಸತ್ಯ=ದಿಟ/ನಿಜ/ವಾಸ್ತವ; ಒತ್ತು=ಹೇರು/ಆಕ್ರಮಿಸು/ಅದುಮು; ತುರುಕುತ್ತೀರಿ +ಏಕೆ; ತುರುಕು=ಒತ್ತಿತುಂಬು/ಅಡಕು;

**ಸತ್ಯವನ್ನು ಒತ್ತಿ ತುರುಕುತ್ತಿರೇಕೆ**=ಅರಿವನ್ನು ಪಡೆಯಲು ಬಂದವರಿಗೆ ಸತ್ಯದ ಸಂಗತಿಗಳನ್ನು ಸರಳವಾಗಿ ಮನದಟ್ಟಾಗುವಂತೆ ಹೇಳುವುದನ್ನು ಬಿಟ್ಟು, ಒತ್ತಾಯ ಪೂರ್ವಕವಾಗಿ ಏಕೆ ಹೇರುತ್ತಿರುವಿರಿ. ಏಕೆಂದರೆ ಸತ್ಯವೆಂಬುದು ಯಾವಾಗಲೂ ಸರಳವಾಗಿರುತ್ತದೆಯೇ ಹೊರತು ಗೋಜಲು ಗೋಜಲಾಗಿರುವುದಿಲ್ಲ;

ಅದರಿಂದ+ಯಾರಿಗೂ; ಒಳಿತು+ಇಲ್ಲ; ಒಳಿತು=ಒಳ್ಳೆಯದು;

**ಅದರಿಂದ್ಯಾರಿಗೂ ಒಳಿತಿಲ್ಲ**=ಒತ್ತಾಯಪೂರ್ವಕವಾಗಿ ಕಲಿಸುವ ವಿದ್ಯೆಯಿಂದ ಗುರುವಿಗಾಗಲಿ ಇಲ್ಲವೇ ಕಲಿಯುವ ವ್ಯಕ್ತಿಗಾಗಲಿ ಒಳಿತಾಗುವುದಿಲ್ಲ. ಅಂದರೆ ಸತ್ಯ ಯಾವುದು ಎಂಬುದನ್ನು ಇಬ್ಬರೂ ಅರಿಯಲಾರರು;

**ನಿಮ್ಮ ಮಾತುಗಳು ನಿಮಗೂ ಕೇಳಲಿ ಗುರುವೇ**=ನೀವು ಆಡಿದ/ಆಡುವ ಮಾತುಗಳು ದಿಟವೋ/ಸುಳ್ಳೋ/ಕಟ್ಟುಕತೆಯೋ ಎಂಬುದನ್ನು ನೀವೇ ಒರೆಹಚ್ಚಿ ನೋಡುವುದರ ಜೊತೆಜೊತೆಗೆ, ನಿಮ್ಮ ಮಾತುಗಳನ್ನು ಆಲಿಸುವ ವ್ಯಕ್ತಿಗಳ ಮನಸ್ಸಿನ ಮೇಲೆ ಮತ್ತು ನಿಮ್ಮ ಮಾತುಗಳಿಂದ ಸಮಾಜದ ಜನಜೀವನದಲ್ಲಿ ಉಂಟಾಗುವ ಪರಿಣಾಮಗಳೇನು ಎಂಬುದನ್ನು ಗಮನಿಸಿ;

ಪ್ರಾಚೀನ ಪುಸ್ತಕಗಳಲ್ಲಿ ಬರೆದಿರುವ ವಿಚಾರಗಳೆಲ್ಲವೂ ಇಲ್ಲವೇ ಪರಂಪರೆಯಿಂದ ಬಂದ ಸಂಗತಿಗಳೆಲ್ಲವೂ ಉತ್ತಮವೆಂಬ ಮೋಹದಿಂದ ಗುರುವಾದವನು ವಾಸ್ತವಕ್ಕೆ ದೂರವಾದ ಕಲ್ಪಿತ ಸಂಗತಿಗಳನ್ನು ಹೇಳಬಾರದು. ತನ್ನ ಬದುಕಿಗೆ ಒಲವು ನಲಿವು ನೆಮ್ಮದಿಯನ್ನು ತಂದುಕೊಡುವಂತೆಯೇ ಸಹಮಾನವರ ಬದುಕಿಗೂ ಒಳಿತನ್ನು ಉಂಟುಮಾಡುವಂತಹ ವಿಚಾರಗಳನ್ನು ಹೇಳಬೇಕು.

ಇತರರಿಗೆ ತಿಳುವಳಿಕೆಯನ್ನು ಹೇಳುವ ವ್ಯಕ್ತಿಯ ವ್ಯಕ್ತಿತ್ವದಲ್ಲಿ **"ತಾನು ಎಲ್ಲವನ್ನೂ ಬಲ್ಲವನು; ತನಗೆ ತಿಳಿಯದಿರುವುದು ಯಾವುದೂ ಇಲ್ಲ"** ಎಂಬ ಅಹಂಕಾರವಿರಬಾರದು. ಸುಳ್ಳಿಗೆ ಸಾವಿರ ರೂಪಗಳಿದ್ದರೆ, ನಿಜಕ್ಕೆ ಒಂದೆ ರೂಪ ಎಂಬುದನ್ನು ಅರಿತಿರಬೇಕು ಎಂಬ ಆಶಯವನ್ನು ಈ ಕವನದಲ್ಲಿ ಸೂಚಿಸಲಾಗಿದೆ. ❖

# ೧೪. ಕೂತುಂಬುವವರು

**ಅನುವಾದ: ಕೆ.ಫಣಿರಾಜ್**

ಕೂತುಂಬುವವರು
ಹಾಸಿಗೆ ಇದ್ದಷ್ಟು ಕಾಲು ಚಾಚೆಂದು
ಬೋಧನೆ ಮಾಡುವರು

ವಿಧಿಲೀಲೆಯಂದದಿ ಯಾರಿಗೆ ದೇಣಿಗೆ
ಹರಿದುಬರುವುದೋ ಅವರು
ಇತರರಿಂದ ತ್ಯಾಗವನ್ನು ಬಯಸುವರು

ಹೊಟ್ಟೆ ತುಂಬಿದವರು
ಹಸಿದವರಿಗೆ ಮುಂಬರಲಿರುವ
ಸುದಿನಗಳ ಬಗ್ಗೆ ಕೊರೆಯುವರು

ದೇಶವನ್ನು ಅಧೋಗತಿಗೆ ತಳ್ಳುವ ಮುಂದಾಳುಗಳು
ಆಳುವ ಭಾರ ಪಾಮರರಿಗೆ
ಬಲು ಘೋರವೆಂಬರು.

**ದುಡಿಮೆಯ ಮೂಲಕ ಸಮಾಜಕ್ಕೆ ಒಳಿತನ್ನು ಮಾಡದೆ, ಉಪದೇಶದ ಮಾತುಗಳನ್ನಾಡುತ್ತ ಪರಾವಲಂಬಿಗಳಾಗಿ ಬಾಳುತ್ತಿರುವ ವ್ಯಕ್ತಿಗಳ ಕಪಟತನದ ನಡೆನುಡಿಯನ್ನು ಈ ಕವನದಲ್ಲಿ ಹೇಳಲಾಗಿದೆ.**

ಕೂತುಂಬುವವರು=ಕೂತು+ಉಂಬುವವರು; ಕೂತು=ಕುಳಿತುಕೊಂಡು; ಉಂಬುವವರು=ಉಣ್ಣುವವರು/ಊಟವನ್ನು ಮಾಡುವವರು; **ಕೂತುಂಬುವವರು**=ಇದೊಂದು ನುಡಿಗಟ್ಟು. ಮಾನವ ಸಮುದಾಯದ ಬದುಕಿಗೆ ಅಗತ್ಯವಾದ ಅನ್ನ, ಬಟ್ಟೆ, ವಸತಿ, ವಿದ್ಯೆ, ಉದ್ಯೋಗ, ಆರೋಗ್ಯ ರಂಗಗಳಲ್ಲಿ ಯಾವುದೇ ಒಂದು ದುಡಿಮೆಯನ್ನು ಮಾಡದೇ, ಕಂಡವರ ಆಸ್ತಿ ಇಲ್ಲವೇ ಸಂಪತ್ತಿನಿಂದ ಆರಾಮವಾಗಿ ಜೀವನವನ್ನು ನಡೆಸುತ್ತಿರುವ ವ್ಯಕ್ತಿಗಳು;

**ಹಾಸಿಗೆ ಇದ್ದಷ್ಟು ಕಾಲು ಚಾಚು**=ಇದೊಂದು ಗಾದೆ. ವ್ಯಕ್ತಿಯು ತನ್ನ ದುಡಿಮೆಯಿಂದ ಬರುವ ಆದಾಯದ ಮಿತಿಯಲ್ಲಿಯೇ ತನ್ನ ಜೀವನವನ್ನು ಕಟ್ಟಿಕೊಳ್ಳಬೇಕು. ಆದಾಯಕ್ಕಿಂತ ಹೆಚ್ಚು ವೆಚ್ಚವನ್ನು ಮಾಡಿದರೆ ಸಾಲಸೋಲಗಳಿಗೆ ಸಿಲುಕಿ ನರಳಬೇಕಾಗುತ್ತದೆ ಎಂಬ ಎಚ್ಚರವನ್ನು ಈ ಗಾದೆಯ ತಿರುಳು ಸೂಚಿಸುತ್ತದೆ; ಬೋಧನೆ=ಉಪದೇಶ/ತಿಳಿಯ ಹೇಳುವುದು;

**ಕೂತುಂಬುವವರು ಹಾಸಿಗೆ ಇದ್ದಷ್ಟು ಕಾಲು ಚಾಚೆಂದು ಬೋಧನೆ ಮಾಡುವರು**=ಪರಿಶ್ರಮ ಮತ್ತು ಪ್ರಾಮಾಣಿಕತನದಿಂದ ದುಡಿದು ತಮ್ಮ ಬದುಕನ್ನು ನಡೆಸದೆ ಮಯ್ಗಳ್ಳರಾಗಿರುವ ವ್ಯಕ್ತಿಗಳು, ಇತರರಿಗೆ ದುಂದು ವೆಚ್ಚವನ್ನು ಮಾಡದೇ ಇದ್ದುದರಲ್ಲಿಯೇ ಹಿತಮಿತವಾಗಿ ಬದುಕನ್ನು ರೂಪಿಸಿಕೊಳ್ಳಬೇಕೆಂಬ ಉಪದೇಶವನ್ನು ಮಾಡುತ್ತಿದ್ದಾರೆ; ಇತರರಿಗೆ ನೀತಿಯನ್ನು ಹೇಳುವ ಮುನ್ನ ತಾನು ನೀತಿವಂತನಾಗಿ ಬಾಳಬೇಕೆಂಬ ಅರಿವು ಮತ್ತು ಎಚ್ಚರವಿಲ್ಲದ ವ್ಯಕ್ತಿಗಳ ವರ್ತನೆಯು ಈ ಬಗೆಯಲ್ಲಿರುತ್ತದೆ;

ವಿಧಿ+ಲೀಲೆಯ+ಅಂದದಿ; ವಿಧಿ=ಹಣೆಬರಹ; ಲೀಲೆ=ಆಟ;

**ವಿಧಿಲೀಲೆ**=ಮಾನವ ಜೀವಿಗಳ ಹುಟ್ಟಿಗೆ ದೇವರು ಕಾರಣನಾಗಿದ್ದಾನೆ. ಪ್ರತಿಯೊಬ್ಬ ವ್ಯಕ್ತಿಯ ಜೀವನದಲ್ಲಿ ಹುಟ್ಟಿನಿಂದ ಸಾವಿನ ತನಕ ಏನೇನು ಆಗಬೇಕು ಏನೇನು ದೊರೆಯಬೇಕು ಎಂಬುದೆಲ್ಲವನ್ನೂ ಆ ದೇವರು ವ್ಯಕ್ತಿಯ ಹಣೆಯಲ್ಲಿ ಬರೆದಿರುತ್ತಾನೆ. ಹಿಂದಿನ ಜನ್ಮಗಳಲ್ಲಿ ಜೀವಿಯು ಮಾಡಿದ ಪಾಪ ಪುಣ್ಯಗಳಿಗೆ ಅನುಸಾರವಾಗಿ, ಈ ಜನ್ಮದಲ್ಲಿ ಸಿರಿವಂತಿಕೆ ಇಲ್ಲವೇ ಬಡತನ ದೊರೆಯುತ್ತದೆ. ವ್ಯಕ್ತಿಯು ತನ್ನ ಪಾಲಿಗೆ ಬಂದಿದ್ದನ್ನು ಒಪ್ಪಿಕೊಂಡು ಬಾಳಬೇಕು ಎಂಬ ನಂಬಿಕೆಯು ಜನಮನದಲ್ಲಿ ಪರಂಪರಾಗತವಾಗಿ ನೆಲೆಸಿದೆ. ಇಂತಹ ನಂಬಿಕೆಯನ್ನು ಸಾವಿರಾರು ವರುಶಗಳಿಂದಲೂ ಸಾಹಿತ್ಯ, ಸಂಗೀತ. ಕಲೆ, ಶಿಲ್ಪಗಳೆಲ್ಲವೂ ಜನಮನದಲ್ಲಿ ಬೇರೂರಿಸಿವೆ. ಈ ನಂಬಿಕೆಯಿಂದಾಗಿ ಬಡವರು

ತಮ್ಮ ಹಸಿವು, ಅಪಮಾನ ಮತ್ತು ಬಡತನಕ್ಕೆ ಜಾತಿಮತಗಳ ಮೇಲು ಕೀಳಿನ ವ್ಯವಸ್ಥೆ ಮತ್ತು ಆರ್ಥಿಕ ವ್ಯವಸ್ಥೆಯಲ್ಲಿನ ತಾರತಮ್ಯ ಕಾರಣವಾಗಿದೆ ಎಂಬುದನ್ನು ಅರಿಯದೆ, ಮುಂದಿನ ಜನ್ಮದಲ್ಲಾದರೂ ಒಳ್ಳೆಯದಾಗಲಿ ಎಂದು ದೇವರ ಮೊರೆಹೋಗುತ್ತಾರೆ;

ಅಂದದಿ=ರೀತಿಯಲ್ಲಿ; ದೇಣಿಗೆ=ಕೊಡುಗೆ/ಕಾಣಿಕೆ;

**ವಿಧಿಲೀಲೆಯಂದದಿ ಯಾರಿಗೆ ದೇಣಿಗೆ ಹರಿದುಬರುವುದು**=ತಮ್ಮ ಸಿರಿತನ ಇಲ್ಲವೇ ಬಡತನಕ್ಕೆ ತಮ್ಮ ಹಣೆಬರಹವೇ ಕಾರಣವೆಂದು ನಂಬಿರುವ ಜನರು ಮುಂದಿನ ದಿನಗಳಲ್ಲಾದರೂ ಇಲ್ಲವೇ ಮುಂದಿನ ಜನ್ಮದಲ್ಲಾದರೂ ಸಿರಿಸಂಪದಗಳು ದೊರೆಯುವಂತಾಗಲಿ ಎಂಬ ಆಸೆಯಿಂದ ಜಾತಿ/ಮತ/ದೇವರ ಹೆಸರಿನಲ್ಲಿ ಕಟ್ಟಿಕೊಂಡಿರುವ ಒಕ್ಕೂಟಗಳಿಗೆ ಮತ್ತು ಅಲ್ಲಿನ ಗುರುಹಿರಿಯರಿಗೆ ಹರಕೆಯ ರೂಪದಲ್ಲಿ ಹಣವನ್ನು ನೀಡುತ್ತಾರೆ. ಸಿರಿವಂತರು ಇನ್ನೂ ಹೆಚ್ಚಿನ ಸಂಪತ್ತು ದೊರೆಯಲಿ ಎಂದು ದೊಡ್ಡ ಮೊತ್ತದ ಹರಕೆಯನ್ನು ಒಪ್ಪಿಸಿದರೆ, ಬಡವರು ತಮ್ಮ ಬಡತನ ನೀಗುವಂತಾಗಲಿ ಎಂದು ತಾವು ಪರಿಶ್ರಮದ ದುಡಿಮೆಯಿಂದ ಗಳಿಸಿದ್ದ ಸಣ್ಣ ಮೊತ್ತದ ಹಣವನ್ನೇ ಕಾಣಿಕೆಯಾಗಿ ನೀಡುತ್ತಾರೆ. ಈ ರೀತಿ ಬಡವ ಬಲ್ಲಿದರಿಬ್ಬರಿಂದಲೂ ಜಾತಿ/ಮತ/ದೇವರ ಹೆಸರಿನ ಒಕ್ಕೂಟಗಳಿಗೆ ಕೋಟಿಗಟ್ಟಲೆ ಹಣ ಪ್ರತಿನಿತ್ಯವೂ ಸಂದಾಯವಾಗುತ್ತಿರುತ್ತದೆ;

ಅವರು=ಜನರು ಕೊಡುವ ಕಾಣಿಕೆಯ ಹಣದಿಂದಲೇ ಜೀವನದಲ್ಲಿ ಎಲ್ಲ ಬಗೆಯ ಅನುಕೂಲವನ್ನು ಪಡೆದು ಬಾಳುತ್ತಿರುವವರು; ತ್ಯಾಗ=ದಾನ/ಕೊಡುಗೆ/ಕಾಣಿಕೆ;

**ಅವರು ಇತರರಿಂದ ತ್ಯಾಗವನ್ನು ಬಯಸುವರು**=ಇತರರು ನೀಡಿದ ದೇಣಿಗೆಯ ಹಣದಿಂದಲೇ ತಮ್ಮ ಹೊಟ್ಟೆಹೊರೆದುಕೊಳ್ಳುತ್ತಿರುವ ಈ ಸೋಮಾರಿಗಳು “ಮಾನವ ಜೀವನವೆಂಬುದು ನೀರಮೇಲಣ ಗುಳ್ಳೆಯಂತೆ. ಆದ್ದರಿಂದ ಜನರೆಲ್ಲರೂ ಒಡವೆ ವಸ್ತುಗಳಿಗಾಗಿ ಆಸೆಪಡದೆ ತ್ಯಾಗಶೀಲರಾಗಿ ಬಾಳಬೇಕು” ಎಂದು ದೊಡ್ಡದಾಗಿ ಉಪದೇಶವನ್ನು ನೀಡುತ್ತಾರೆ;

ಹೊಟ್ಟೆ ತುಂಬಿದವರು=ನೆಮ್ಮದಿಯ ಜೀವನಕ್ಕೆ ಅಗತ್ಯವಾದ ವಸ್ತು ಒಡವೆ ಆಸ್ತಿಯನ್ನು ಹೊಂದಿರುವವರು; ಮುಂದೆ+ಬರಲಿರುವ; ಸುದಿನ=ಒಳ್ಳೆಯ ದಿನ/ಯಾವುದೇ ಕೊರತೆಗಳಿಲ್ಲದೆ ನೆಮ್ಮದಿಯಿಂದ ಬಾಳುವ ದಿನ; ಕೊರೆ=ಕೇಳುವವರಿಗೆ ಬೇಸರ ಉಂಟಾಗುವಂತೆ ಒಂದೇ ಸಮನೆ ಹೇಳಿದ್ದನ್ನೇ ಹೇಳುತ್ತಿರುವುದು;

**ಹೊಟ್ಟೆ ತುಂಬಿದವರು ಹಸಿದವರಿಗೆ ಮುಂಬರಲಿರುವ ಸುದಿನಗಳ ಬಗ್ಗೆ ಕೊರೆಯುವವರು**=ದುಡಿಯುವ ಶ್ರಮಜೀವಿಗಳ ಹಸಿವು, ಅಪಮಾನ ಮತ್ತು ಬಡತನದ ನಿವಾರಣೆಗೆ ಅಡ್ಡಿಯಾಗಿರುವ ಜಾತಿ ಮತದ ವ್ಯವಸ್ಥೆ ಮತ್ತು ಆರ್ಥಿಕ ವ್ಯವಸ್ಥೆಯಲ್ಲಿರುವ ತಾರತಮ್ಯವನ್ನು ಹೋಗಲಾಡಿಸಲು ಪ್ರಯತ್ನಿಸದೆ, ಮುಂದಿನ ದಿನಗಳಲ್ಲಿ ಬಡವರಿಗೆ ಜೀವನಕ್ಕೆ ಅಗತ್ಯವಾದುದೆಲ್ಲವೂ ದೊರೆಯುವುದೆಂಬ ಪೊಳ್ಳು ಭರವಸೆಯ ನುಡಿಗಳನ್ನು ಆಡುವರು;

ಅಧೋಗತಿ=ಅವನತಿ/ಕೆಳಮಟ್ಟ; ತಳ್ಳು=ದೂಡು/ನೂಕು/ದಬ್ಬು; ಮುಂದಾಳು=ನಾಯಕ/ಮುನ್ನಡೆಸುವವನು;

**ದೇಶವನ್ನು ಅಧೋಗತಿಗೆ ತಳ್ಳುವ ಮುಂದಾಳುಗಳು**=ದೇಶದ ಆಡಳಿತ ಸೂತ್ರವನ್ನು ಹಿಡಿದು, ಜನಸಮುದಾಯದ ಒಲವು ನಲಿವು ನೆಮ್ಮದಿಯ ಜೀವನಕ್ಕೆ ಅತ್ಯಗತ್ಯವಾದ ಅನ್ನ, ಬಟ್ಟೆ, ವಸತಿ, ವಿದ್ಯೆ, ಉದ್ಯೋಗ, ಆರೋಗ್ಯದ ಅನುಕೂಲ ಗಳನ್ನು ಒದಗಿಸಲು ಯೋಜನೆಗಳನ್ನು ರೂಪಿಸಿ, ಅವನ್ನು ಸರಿಯಾಗಿ ಸಕಾಲದಲ್ಲಿ ಕಾರ್ಯರೂಪಕ್ಕೆ ತರದೆ, ಅಧಿಕಾರದ ಗದ್ದುಗೆಯನ್ನು ಪಡೆಯುವುದಕ್ಕಾಗಿ ಮತ್ತು ಪಡೆದ ಅಧಿಕಾರವನ್ನು ಉಳಿಸಿಕೊಳ್ಳುವುದಕ್ಕಾಗಿ ದೇಶದ ಸಂಪತ್ತನ್ನು ಲೂಟಿ ಹೊಡೆಯುತ್ತ, ಜಾತಿ ಮತ ದೇವರ ಹೆಸರಿನಲ್ಲಿ ಜನಸಮುದಾಯಗಳ ನಡುವೆ ಅಸಹನೆ, ಅನುಮಾನ, ಅಸೂಯೆ ಮತ್ತು ಹಗೆತನದ ಒಳಮಿಡಿತಗಳನ್ನು ಕೆರಳಿಸಿ, ಪರಸ್ಪರ ಹೊಡೆದಾಟ ಕೊಲೆ ಸುಲಿಗೆಯಲ್ಲಿ ತೊಡಗುವಂತೆ ಮಾಡುತ್ತ, ಸಿರಿವಂತರ ಸಂಪತ್ತನ್ನು ಇಮ್ಮಡಿಗೊಳಿಸುತ್ತ, ದುಡಿಯುವ ಶ್ರಮಜೀವಿಗಳ ಬದುಕನ್ನು ಬಡತನದ ಆಳಕ್ಕೆ ತಳ್ಳುತ್ತಿರುವ ರಾಜಕಾರಣಿಗಳು;

ಆಳುವ ಭಾರ=ಆಡಳಿತವನ್ನು ನಡೆಸುವ ಹೊಣೆಗಾರಿಕೆ/ಜವಾಬ್ದಾರಿ;

ಪಾಮರ=ದಡ್ಡ/ಗತಿಯಿಲ್ಲದವನು/ತಿಳುವಳಿಕೆಯಿಲ್ಲದವನು; ಬಲು=ಬಹಳ/ ಅತಿ ಹೆಚ್ಚು; ಘೋರ+ಎಂಬರು; ಘೋರ=ಕಷ್ಟ/ತೊಂದರೆ/ಹಿಂಸೆ; ಎಂಬರು= ಎನ್ನುವರು;

**ಆಳುವ ಭಾರ ಪಾಮರರಿಗೆ ಬಲು ಘೋರವೆಂಬರು**=ದೇಶದ ಆಡಳಿತವನ್ನು ಸುಗಮವಾಗಿ ನಡೆಸುವುದಕ್ಕೆ ಬಹಳ ಅಡ್ಡಿ ಆತಂಕಗಳಿವೆ. ಅವನ್ನೆಲ್ಲಾ ತೊಡೆದುಹಾಕಿ, ದೇಶವನ್ನು ಪ್ರಗತಿಯತ್ತ ಮುನ್ನಡೆಸುವ ಕಸುವು ಪಾಮರರಲ್ಲಿ ಇಲ್ಲವೆಂದು ಆಡಳಿತದ ಗದ್ದುಗೆಯನ್ನು ಹಿಡಿದು ಕುಳಿತವರು ಹೇಳುತ್ತಾರೆ;

**ದೇಶವನ್ನು ಅಧೋಗತಿಗೆ ತಳ್ಳುವ ಮುಂದಾಳುಗಳು ಆಳುವ ಭಾರ ಪಾಮರರಿಗೆ ಬಲು ಘೋರವೆಂಬರು**=ದೇಶದ ಆಡಳಿತದ ಗದ್ದುಗೆಯನ್ನು ಜಾತಿಮತದ ಬಲ, ಹಣಬಲ, ತೋಳ್ಬಲದಿಂದ ಹಿಡಿದುಕೊಂಡಿರುವ ರಾಜಕಾರಣಿಗಳು ದುಡಿಯುವ ಶ್ರಮಜೀವಿಗಳ ಕಯ್ಗೆ ದೇಶದ ಆಡಳಿತ ಸೂತ್ರವನ್ನು ಕೊಡಲು ಒಪ್ಪುವುದಿಲ್ಲ. ಏಕೆಂದರೆ ಅಧಿಕಾರ ಒಮ್ಮೆ ಕಯ್ ತಪ್ಪಿದರೆ ತಮ್ಮ ಜಾತಿ ಮತದ ಹಿರಿಮೆ ಕುಗ್ಗುತ್ತದೆ; ತಮ್ಮ ಸಂಪತ್ತು ಕಡಿಮೆಯಾಗುತ್ತದೆ ಮತ್ತು ತಮ್ಮ ದಬ್ಬಾಳಿಕೆಯ ಆಡಳಿತ ಕೊನೆಗೊಳ್ಳುತ್ತದೆ ಎಂಬ ಹೆದರಿಕೆಯು ದೇಶವನ್ನು ಆಳುತ್ತಿರುವ ರಾಜಕಾರಣಿಗಳ ಮನದಲ್ಲಿದೆ ಎಂಬುದನ್ನು ಈ ನುಡಿಗಳು ಸೂಚಿಸುತ್ತಿವೆ.

ದಿನ ಬೆಳಗಾದರೆ ಪ್ರಕಟಗೊಳ್ಳುತ್ತಿರುವ ಪತ್ರಿಕಾ ವರದಿಗಳಲ್ಲಿ ಮತ್ತು ಇಪ್ಪತ್ನಾಲ್ಕು ಗಂಟೆಯೂ ಪ್ರಸಾರಗೊಳ್ಳುವ ಟಿ.ವಿ. ಚಾನೆಲ್ ಗಳಲ್ಲಿ ಜನರಿಗೆ ಉಪದೇಶ ಮಾಡುವವರಲ್ಲಿ ಬಹುತೇಕ ಮಂದಿ ಯಾವುದೇ ದುಡಿಮೆಯನ್ನು ಮಾಡದೆ ಮತ್ತು ಒಳ್ಳೆಯ ಆಡಳಿತವನ್ನು ನಡೆಸದೆ, ಬರಿ ಮಾತಿನಲ್ಲೇ ಮಂಟಪವನ್ನು ಕಟ್ಟಿದಂತೆ ಜನಸಮುದಾಯದ, ಸಮಾಜದ ಮತ್ತು ದೇಶದ ಬಗ್ಗೆ ದೊಡ್ಡ ದೊಡ್ಡ ಮಾತುಗಳನ್ನಾಡುತ್ತಿರುವವರ ವ್ಯಕ್ತಿತ್ವವನ್ನು ಈ ಕವನ ಸೂಚಿಸುತ್ತಿದೆ.



# ೧೫. ಸರಳಜೀವಿ ನಮ್ಮ ಪ್ರಭುಗಳು

**ಅನುವಾದ: ಕೆ.ಫಣಿರಾಜ್**

ನಮ್ಮ ಪ್ರಭುಗಳು
ಸಾಮಾನ್ಯ ಮನೆಯಲ್ಲಿ ವಾಸಿಸುತ್ತಾರೆ
ಮಾಂಸ ಸೇವಿಸೋದಿಲ್ಲ
ಹೆಂಡ ಮುಟ್ಟೋದಿಲ್ಲ
ಧೂಮಪಾನ... ಊಹುಂ... ಇಲ್ಲವೇ ಇಲ್ಲ
ಅಂತ ಜನಜನಿತ
ಆದರೆ ಅವರ ರಾಜ್ಯಭಾರದಲ್ಲಿ
ಬಡವರು ಹಸಿವಿನಿಂದ ನೊಂದು ಸಾಯುತ್ತಾರೆ
ಅಂತಾನೂ ಜನ ಹೇಳ್ತಾರೆ

ಇದರ ಬದಲಿಗೆ
ಪ್ರಭುಗಳು ಸಮಾ ಕುಡಿದು
ಸಚಿವ ಸಂಪುಟ ಸಭೆಯಲ್ಲಿ
ಕಂಡವರ ಸಿಗರೇಟು ಚುಟ್ಟಾ ಕಸಿದು ಸೇದುತ್ತಾರೆ
ಕೆಲವು ಬುದ್ಧಿಗೇಡಿಗಳು ಕೂಡಿಕೊಂಡು
ಸದಾ ಕಾನೂನನ್ನು ತಿದ್ದುತ್ತಲೇ ಇರುತ್ತಾರೆ
ಆದರೂ ಈ ರಾಜ್ಯದಲ್ಲಿ ಬಡವರಿಲ್ಲ
ಅಂತ ಜನ ಹೇಳುವಂತಿದ್ದರೆ
ಎಷ್ಟು ಚೆನ್ನಾಗಿರುತ್ತೆ.

**ಜಗತ್ತಿನ ಯಾವುದೇ ಒಂದು ನಾಡಿನಲ್ಲಿ ಜನರು ಬಡತನದಿಂದ ನರಳುತ್ತಿದ್ದರೆ ಇಲ್ಲವೇ ಬಡತನವಿಲ್ಲದೆ ನೆಮ್ಮದಿಯಿಂದ ಬಾಳುತ್ತಿದ್ದರೆ, ಅದಕ್ಕೆ ಕಾರಣ "ಒಬ್ಬ ವ್ಯಕ್ತಿಯಲ್ಲ; ಆ ನಾಡಿನಲ್ಲಿರುವ ವ್ಯವಸ್ಥೆ" ಎಂಬ ಸಂಗತಿಯನ್ನು ಈ ಕವನದಲ್ಲಿ ವಿಡಂಬನೆಯ ನುಡಿಗಟ್ಟುಗಳ ಮೂಲಕ ಚಿತ್ರಿಸಲಾಗಿದೆ.**

ವ್ಯವಸ್ಥೆ ಎಂದರೆ ನಾಡಿನಲ್ಲಿ ಆಚರಣೆಯಲ್ಲಿರುವ ರಾಜಕೀಯ, ಸಾಮಾಜಿಕ, ಧಾರ್ಮಿಕ ಮತ್ತು ಸಂಪತ್ತಿನ ವಿತರಣೆಯಲ್ಲಿರುವ ಕಟ್ಟುಪಾಡುಗಳು;

ವಿಡಂಬನೆಯ ನುಡಿಗಟ್ಟು=ಮೇಲುನೋಟಕ್ಕೆ ಹಾಸ್ಯ ಇಲ್ಲವೇ ಅಣಕ ಮಾಡುವಂತೆ ಕಂಡುಬಂದರೂ, ಒಳನೋಟದಲ್ಲಿ ವಾಸ್ತವವನ್ನು/ನಿಜವನ್ನು/ಸತ್ಯವನ್ನು ಹೇಳುವಂತಹ ನುಡಿಗಳು;

ಪ್ರಭು=ನಾಡಿನ ಅಧಿಕಾರದ ಗದ್ದುಗೆಯಲ್ಲಿ ಕುಳಿತು ರಾಜ್ಯದ ಆಡಳಿತವನ್ನು ನಡೆಸುವ ವ್ಯಕ್ತಿ; ನಮ್ಮ ಪ್ರಭುಗಳು=ನಮ್ಮನ್ನು ಆಳುತ್ತಿರುವ ರಾಜ; ಸಾಮಾನ್ಯ=ಯಾವುದೇ ಆಡಂಬರವಿಲ್ಲದ/ಸರಳವಾದ;

**ಸಾಮಾನ್ಯ ಮನೆಯಲ್ಲಿ ವಾಸಿಸುತ್ತಾರೆ**=ಬೆಲೆಬಾಳುವ ವಸ್ತುಗಳಿಂದ ಸುಸಜ್ಜಿತವಾಗಿಲ್ಲದ ಮನೆಯಲ್ಲಿ ವಾಸ ಮಾಡುತ್ತಿದ್ದಾರೆ. ಅರಮನೆಯನ್ನು ತ್ಯಜಿಸಿ, ಜನಸಾಮಾನ್ಯರಂತೆ ವಾಸಿಸುತ್ತಿದ್ದಾರೆ;

ಸೇವಿಸು=ತಿನ್ನು; **ಮಾಂಸ ಸೇವಿಸೋದಿಲ್ಲ**=ಮಾಂಸವನ್ನು ತಿನ್ನುವುದಿಲ್ಲ. ಪ್ರಾಣಿ ಪಕ್ಷಿಗಳ ಜೀವಹತ್ಯೆಗೆ ಕಾರಣವಾಗುವ ಆಹಾರವನ್ನು ತ್ಯಜಿಸಿ, ಜೀವದಯೆಯುಳ್ಳ ವ್ಯಕ್ತಿಯಾಗಿದ್ದಾರೆ; ಹೆಂಡ=ಕುಡಿದಾಗ ಮತ್ತು ಇಲ್ಲವೇ ಅಮಲನ್ನು ತರಿಸುವ ಪಾನೀಯ;

**ಹೆಂಡ ಮುಟ್ಟೋದಿಲ್ಲ**=ಕುಡಿದಾಗ ಮತ್ತನ್ನು ತರಿಸುವಂತಹ ಯಾವುದೇ ಪಾನೀಯಗಳನ್ನು ಮುಟ್ಟುವುದೂ ಇಲ್ಲ. ವ್ಯಕ್ತಿಯ ವ್ಯಕ್ತಿತ್ವದ ನಾಶಕ್ಕೆ ಕಾರಣವಾಗುವ ಕುಡಿತದ ಚಟದಿಂದ ಬಹುದೂರವಿದ್ದಾರೆ;

ಧೂಮ=ಹೊಗೆ; ಪಾನ=ಕುಡಿಯುವಿಕೆ; **ಧೂಮಪಾನ ಊಹುಂ ಇಲ್ಲವೇ ಇಲ್ಲ**=ಹೊಗೆಸೊಪ್ಪಿನಿಂದ ತಯಾರಿಸಿದ ಬೀಡಿ ಸಿಗರೇಟು ಚುಟ್ಟಾ ಮುಂತಾದುವನ್ನು ಬಳಸುವುದೇ ಇಲ್ಲ. ಧೂಮಪಾನವನ್ನು ಮಾಡುವ ವ್ಯಕ್ತಿಯು ತನ್ನ ದೇಹಕ್ಕೂ ಹಾನಿಯನ್ನು ತಂದುಕೊಳ್ಳುತ್ತಾನೆ ಮತ್ತು ಪರಿಸರದ ಆರೋಗ್ಯವನ್ನು ಹಾಳು ಮಾಡುತ್ತಾನೆ. ಇಂತಹ ದುಶ್ಚಟವನ್ನು ನಮ್ಮ ರಾಜನು

ಕಲಿತಿಲ್ಲ; ಅಂತ=ಹಾಗೆ/ಆ ರೀತಿ; ಜನಜನಿತ=ಜನರಲ್ಲಿ ಹಬ್ಬಿರುವ/ಎಲ್ಲರಿಗೂ ತಿಳಿದಿರುವ;

**ಅಂತ ಜನಜನಿತ**=ನಮ್ಮ ರಾಜನು ಯಾವುದೇ ಕೆಟ್ಟಗುಣ ಮತ್ತು ದುಶ್ಚಟವಿಲ್ಲದ, ಅತ್ಯಂತ ಸರಳ ಸಜ್ಜನಿಕೆಯ ವ್ಯಕ್ತಿಯೆಂದು ನಾಡಿನ ಜನರೆಲ್ಲರೂ ಗುಣಗಾನ ಮಾಡುತ್ತಿದ್ದಾರೆ; ರಾಜ್ಯಭಾರ=ರಾಜ್ಯದ ಆಡಳಿತವನ್ನು ನಡೆಸುವಿಕೆ; ಬಡವರು=ಜೀವನಕ್ಕೆ ಅತ್ಯಗತ್ಯವಾದ ಅನ್ನ-ಬಟ್ಟೆ-ವಸತಿ-ವಿದ್ಯೆ-ಉದ್ಯೋಗ-ಆರೋಗ್ಯವನ್ನು ಪಡೆಯಲಾಗದೆ, ಹಸಿವು ಬಡತನ ಮತ್ತು ಅಪಮಾನದಿಂದ ಬಾಳುತ್ತಿರುವವರು; ಅಂತಾನೂ=ಆ ರೀತಿಯಲ್ಲಿಯೂ;

**ಆದರೆ ಅವರ ರಾಜ್ಯಭಾರದಲ್ಲಿ ಬಡವರು ಹಸಿವಿನಿಂದ ನೊಂದು ಸಾಯುತ್ತಾರೆ ಅಂತಾನೂ ಜನ ಹೇಳ್ತಾರೆ=ಆದರೆ** ಇಂತಹ ಒಳ್ಳೆಯ ಗುಣಗಳಿಂದ ಕೂಡಿದ ರಾಜನ ಆಡಳಿತದಲ್ಲಿ ದುಡಿಯುವ ಶ್ರಮಜೀವಿಗಳಾದ ಬಡವರು ಹಸಿವಿನಿಂದ ತತ್ತರಿಸಿ ಸಾಯುತ್ತಿದ್ದಾರೆ ಅಂತಾನೂ ಜನರು ಮಾತನಾಡಿಕೊಳ್ಳುತ್ತಿದ್ದಾರೆ. ಅಂದರೆ ರಾಜನು ಗುಣವಂತನಾಗಿದ್ದರೂ ಬಡಜನರಿಗೆ ಅದರಿಂದ ಏನೂ ಒಳಿತಾಗಿಲ್ಲ;

**ಇದರ ಬದಲಿಗೆ**=ಇಂತಹ ಸುದ್ದಿಯೊಂದನ್ನು ಕೇಳಿದ ಕವಿಯು ತನ್ನ ಮನದಲ್ಲಿಯೇ ರಾಜನ ನಡೆನುಡಿಯನ್ನು ಮತ್ತೊಂದು ರೀತಿಯಲ್ಲಿ ಕಲ್ಪಿಸಿಕೊಂಡು ಬಡತನವಿಲ್ಲದ ಜನರಿಂದ ಕೂಡಿದ ರಾಜ್ಯದ ಕನಸನ್ನು ಕಾಣತೊಡಗುತ್ತಾನೆ;

ಸಮಾ ಕುಡಿದು=ಕಂಟಮಟ್ಟ ಕುಡಿದು; ಸಚಿವ=ಮಂತ್ರಿ; ಸಂಪುಟ= ಮಂತ್ರಿ ಮಂಡಲ; ಕಂಡವರ=ಇತರರ; ಚುಟ್ಟಾ=ಹೊಗೆಸೊಪ್ಪಿನಿಂದ ತಯಾರಿಸಿರುವ ವಸ್ತು; ಕಸಿದು=ಕಿತ್ತುಕೊಂಡು;

**ಪ್ರಭುಗಳು ಸಮಾ ಕುಡಿದು ಸಚಿವ ಸಂಪುಟದ ಸಭೆಯಲ್ಲಿ ಕಂಡವರ ಸಿಗರೇಟು ಚುಟ್ಟಾ ಕಸಿದು ಸೇದುತ್ತಾರೆ**=ರಾಜರು ಕಂಠಮಟ್ಟ ಕುಡಿದು ಅಮಲೇರಿ, ಮಯ್ ಮನದ ಮೇಲಿನ ಅರಿವನ್ನು ಕಳೆದುಕೊಂಡು, ಸಚಿವ ಸಂಪುಟದ ಸಭೆಯಲ್ಲಿ ಇತರರಿಂದ ಸಿಗರೇಟು ಚುಟ್ಟಾವನ್ನು ಕಿತ್ತುಕೊಂಡು ಸೇದುತ್ತಾರೆ. ಅಂದರೆ ರಾಜನಾಗಿ ಸಚಿವ ಸಂಪುಟದ ಸಭೆಯಲ್ಲಿ ತಾನು ವಹಿಸಬೇಕಾದ ಜವಾಬ್ದಾರಿಯನ್ನೇ ಕಡೆಗಣಿಸಿ, ತಾನು ಮಾಡಬೇಕಾದ ಕೆಲಸವನ್ನೇ ಮರೆತು, ಕುಡಿತದ ಅಮಲಿನಲ್ಲಿ ಮಯ್ ಮರೆತಿದ್ದಾನೆ;

ಬುದ್ಧಿ+ಕೇಡಿ; ಬುದ್ಧಿಗೇಡಿ=ತಿಳುವಳಿಕೆಯಿಲ್ಲದ; ಸದಾ=ಎಲ್ಲ ಕಾಲದಲ್ಲಿಯೂ/

ಯಾವಾಗಲೂ; ಕಾನೂನು=ರಾಜ್ಯದ ಆಡಳಿತವನ್ನು ನಡೆಸಲು ಅಗತ್ಯವಾದ ಕಟ್ಟುಪಾಡುಗಳು; ತಿದ್ದು=ಬದಲಾಯಿಸು;

**ಕೆಲವು ಬುದ್ಧಿಗೇಡಿಗಳು ಕೂಡಿಕೊಂಡು ಸದಾ ಕಾನೂನನ್ನು ತಿದ್ದುತ್ತಲೇ ಇರುತ್ತಾರೆ**=ಆಡಳಿತದ ಗದ್ದುಗೆಗೆ ಹತ್ತಿರದಲ್ಲಿದ್ದುಕೊಂಡು ರಾಜನ ಹೊಣೆಗೇಡಿತನವನ್ನು ಗಮನಿಸಿರುವ ಕೆಲವು ತಿಳಿಗೇಡಿಗಳು ಜತೆಗೂಡಿ, ರಾಜ್ಯದಲ್ಲಿರುವ ಕಾನೂನನ್ನು ರಾಜನ ಗಮನಕ್ಕೆ ತರದೆ ತಮ್ಮ ಇಚ್ಚೆಯಂತೆ ಬದಲಾಯಿಸುತ್ತಲೇ ಇರುತ್ತಾರೆ;

**ಆದರೂ ಈ ರಾಜ್ಯದಲ್ಲಿ ಬಡವರಿಲ್ಲ ಅಂತ ಜನ ಹೇಳುವಂತಿದ್ದರೆ ಎಷ್ಟು ಚೆನ್ನಾಗಿರುತ್ತೆ**=ಇಷ್ಟೆಲ್ಲಾ ದುಶ್ಚಟಗಳನ್ನುಳ್ಳ ಮತ್ತು ಜವಾಬ್ದಾರಿಯನ್ನೇ ಮರೆತಿರುವ ರಾಜನ ಆಡಳಿತವಿರುವ ರಾಜ್ಯದಲ್ಲಿ ಬಡವರೇ ಇಲ್ಲ ಎಂದು ಜನರು ಹೇಳುವಂತಿದ್ದರೆ ಎಷ್ಟು ಚೆನ್ನಾಗಿರುತ್ತದೆ ಎಂದು ಕವಿ ಕಲ್ಪನೆಯು ಕನಸನ್ನು ಕಾಣುತ್ತದೆ.

ಮೇಲುನೋಟಕ್ಕೆ ಈ ಕವನದಲ್ಲಿ ನಿರೂಪಣೆಗೊಂಡಿರುವ ಸಂಗತಿಯು ವಿಚಿತ್ರವಾಗಿ ಕಾಣಿಸುತ್ತದೆ. ನಾಡನ್ನಾಳುವ ರಾಜನು ದುಶ್ಚಟಗಳಿಗೆ ಬಲಿಯಾದರೆ ಆ ನಾಡು ಉಳಿಯುವುದಿಲ್ಲವೆಂಬ ಮತ್ತು ರಾಜನು ಸಜ್ಜನನಾದರೆ ನಾಡು ನೆಮ್ಮದಿಯಿಂದ ಇರುವುದೆಂಬ ಭಾವನೆಯು ನಮ್ಮೆಲ್ಲರನ್ನೂ ಒಳಗೊಂಡಂತೆ ಎಲ್ಲ ಕಾಲದಲ್ಲಿಯೂ ಎಲ್ಲ ಜನಸಮುದಾಯಗಳಲ್ಲಿಯೂ ಇದೆ. ಆದರೆ ಇದು ಕೇವಲ ಜನರ ಒಂದು ಕಲ್ಪಿತ ನಂಬಿಕೆಯೇ ಹೊರತು ವಾಸ್ತವವಲ್ಲ. ಏಕೆಂದರೆ ಇಂದಿಗೂ ನಾಡನ್ನು ಆಳುವ ವ್ಯಕ್ತಿ ಒಳ್ಳೆಯವನಾಗಿರಲಿ ಇಲ್ಲವೇ ಕೆಟ್ಟವನಾಗಿರಲಿ ಜಗತ್ತಿನ ಬಹುತೇಕ ದೇಶಗಳೆಲ್ಲವೂ ಒಂದಲ್ಲ ಒಂದು ಬಗೆಯ ಆತಂಕದಿಂದ ತತ್ತರಿಸುತ್ತಿವೆ. **ಇದಕ್ಕೆ ಕಾರಣ ಒಬ್ಬ ವ್ಯಕ್ತಿಯಿಂದ ನಾಡು ರೂಪುಗೊಂಡಿಲ್ಲ; ವ್ಯವಸ್ಥೆಯಿಂದ ನಾಡು ರೂಪುಗೊಂಡಿರುತ್ತದೆ;**

**"ರಾಮ ರಾಜ್ಯವನ್ನಾಳಿದರೂ ರಾಗಿ ಬೀಸುವುದು ತಪ್ಪುವುದಿಲ್ಲ"** ಎಂಬ ಕನ್ನಡದ ಒಂದು ನಾಣ್ಣುಡಿಯು ಈ ಕವನದಲ್ಲಿ ನಿರೂಪಣೆಗೊಂಡಿರುವ ವಿಚಾರವನ್ನೇ ಪ್ರತಿಪಾದಿಸುತ್ತದೆ. ರಾಮರಾಜ್ಯದಲ್ಲಿಯೂ ದುಡಿಯುವ ಶ್ರಮಜೀವಿಗಳ ಬವಣೆ ಯಾಗಲಿ ಇಲ್ಲವೇ ಬಡತನವಾಗಲಿ ನಿವಾರಣೆಗೊಳ್ಳಲಿಲ್ಲ. ಏಕೆಂದರೆ ರಾಮನು ಕೂಡ ಎಲ್ಲ ರಾಜರಂತೆಯೇ ಮೇಲುಕೀಳಿನ ವರ್ಣಪದ್ಧತಿ ಮತ್ತು ಜಾತಿ ಪದ್ಧತಿಯನ್ನು ಕಾಪಾಡಿಕೊಂಡು ಬರುವ ರಾಜನಾಗಿದ್ದ. ಪ್ರಾಚೀನ ಕಾಲದಲ್ಲಿ

ಇಂಡಿಯಾ ದೇಶದಲ್ಲಿ ರಚನೆಗೊಂಡಿದ್ದ ಧರ್ಮದ ಹೊತ್ತಿಗೆಗಳು ಮತ್ತು ಮಹಾ ಕಾವ್ಯಗಳೆಲ್ಲವೂ **"ರಾಜನಾದವನು ಮೇಲುಕೀಳಿನ ವ್ಯವಸ್ಥೆಯುಳ್ಳ ವರ್ಣಪದ್ಧತಿ ಮತ್ತು ಜಾತಿಪದ್ಧತಿಯನ್ನು ಕಾಪಾಡಿಕೊಂಡು ಬರುವುದೇ ಧರ್ಮ ಪರಿಪಾಲನೆ ಮತ್ತು ಧರ್ಮ ರಕ್ಷಣೆಯ ಒಳ್ಳೆಯ ಆಡಳಿತ"** ಎಂಬ ಆದೇಶವನ್ನು ನೀಡಿವೆ.

ಸಾವಿರಾರು ವರುಶಗಳಿಂದಲೂ ಇಂಡಿಯಾ ದೇಶದ ಜನಸಮುದಾಯದಲ್ಲಿ ವರ್ಣ ಪದ್ಧತಿ ಮತ್ತು ಜಾತಿ ಪದ್ಧತಿಯ ಕಾರಣದಿಂದಾಗಿ ಬ್ರಾಹ್ಮಣ–ಕ್ಷತ್ರಿಯ–ವೈಶ್ಯರಿಗೆ ಮಾತ್ರ ವಿದ್ಯೆ, ಅಧಿಕಾರ ಮತ್ತು ಸಂಪತ್ತಿನ ಮೇಲೆ ಒಡೆತನವಿದ್ದು, ಶೂದ್ರರು ಮತ್ತು ದಲಿತರು ಮೇಲಿನ ಮೊದಲ ಮೂರು ವರ್ಣದವರ ಸೇವೆಯಲ್ಲಿಯೆ ಬಾಳಬೇಕು ಎಂಬ ಸಾಮಾಜಿಕ ಮತ್ತು ಧಾರ್ಮಿಕ ಕಟ್ಟುಪಾಡುಗಳು ದುಡಿಯುವ ಶ್ರಮಜೀವಿಗಳಾದ ಕೆಳಜಾತಿಯ ಜನಸಮುದಾಯದಲ್ಲಿ ಬಡತನವನ್ನು ಶಾಶ್ವತಗೊಳಿಸಿತ್ತು. ಆಂಗ್ಲರ ಆಡಳಿತಕ್ಕೆ ಒಳಪಟ್ಟ ಇಂಡಿಯಾ ದೇಶದಲ್ಲಿ ಹತ್ತೊಂಬತ್ತನೆಯ ಶತಮಾನದ ಅಂತ್ಯ ಭಾಗದಿಂದ ಜಾರಿಗೆ ಬಂದ ಸಾರ್ವಜನಿಕ ಶಿಕ್ಷಣ ಮತ್ತು ಇಪ್ಪತ್ತನೆಯ ಶತಮಾನದ ಆದಿಯಿಂದ ಬಂದ ಜಾತಿ ಮೀಸಲಾತಿಯ ಕಾರಣದಿಂದಾಗಿ ಶೂದ್ರರು ಮತ್ತು ದಲಿತರು ವಿದ್ಯೆಯನ್ನು ಪಡೆದು, ಸಮಾಜದ ಎಲ್ಲ ರಂಗಗಳಲ್ಲಿಯೂ ಸ್ಥಾನಮಾನಗಳನ್ನು ಪಡೆದು, ಬಡತನದಿಂದ ತುಸು ಹೊರಬರಲು ಅವಕಾಶ ದೊರಕಿತು. ಇದು ವ್ಯವಸ್ಥೆಯಲ್ಲಾದ ಬದಲಾವಣೆಯಿಂದಾಗಿಯೇ ಹೊರತು, ವ್ಯಕ್ತಿಯೊಬ್ಬನಿಂದ ಆದುದಲ್ಲ;

ಜಗತ್ತಿನ ಇತರ ದೇಶಗಳಲ್ಲಿಯೂ ಕರಿಯರು/ಬಿಳಿಯರು ಎಂಬ ಮಯ್ ಬಣ್ಣದ ತಾರತಮ್ಯ; ಆರ್ಯರು, ಯೆಹೂದಿಗಳು, ಮುಸ್ಲಿಮರು ಎಂಬ ಜನಾಂಗ ತಾರತಮ್ಯ; ಪ್ರೊಟಸ್ಟಂಟರು ಮತ್ತು ಕ್ಯಾಥೊಲಿಕರು ಎಂಬ ಧಾರ್ಮಿಕ ಗುಂಪುಗಳ ತಾರತಮ್ಯವುಳ್ಳ ವ್ಯವಸ್ಥೆಯಿಂದಾಗಿ ರಾಜಕೀಯ ಅಧಿಕಾರ ಮತ್ತು ಸಂಪತ್ತಿನ ಒಡೆತನವು ಪ್ರಬಲರ ಪಾಲಿಗೆ ದಕ್ಕುವುದರಿಂದ, ಎಲ್ಲ ದೇಶಗಳಲ್ಲಿಯೂ ಇಂದಿಗೂ ಶೇ ೪೦ ಕ್ಕಿಂತ ಹೆಚ್ಚು ಮಂದಿ ಬಡವರಾಗಿಯೇ ಹುಟ್ಟಿ, ಬಡತನದಲ್ಲಿಯೇ ಬೆಂದು ನೊಂದು, ಬಡವರಾಗಿಯೇ ಸಾವನ್ನಪ್ಪುತ್ತಿದ್ದಾರೆ.

ಈ ಕವನವನ್ನು ಬರೆದಿರುವ ಬ್ರೆಕ್ಟ್ ಅವರು ಸಮಾಜ ವಿಜ್ಞಾನಿ ಕಾರ್ಲ್‌ಮಾರ್ಕ್ಸ್ (೧೮೧೮–೧೮೮೩) ಅವರ ಸಮತಾವಾದವನ್ನು ಒಪ್ಪಿಕೊಂಡವರಾಗಿದ್ದರು. ಆದ್ದರಿಂದ ಮಾನವ ಸಮುದಾಯವು ಬಡತನದ ಸಂಕಟದಿಂದ ಪಾರಾಗಿ, ಜೀವನಕ್ಕೆ ಅತ್ಯಗತ್ಯವಾದ ಅನ್ನ ಬಟ್ಟೆ ವಸತಿ ವಿದ್ಯೆ ಉದ್ಯೋಗ ಆರೋಗ್ಯವನ್ನು

ಪಡೆದು ನೆಮ್ಮದಿಯಿಂದ ಬಾಳುವಂತಾಗಬೇಕಾದರೆ ಅದು ಒಬ್ಬ ವ್ಯಕ್ತಿಯಿಂದ ಆಗುವುದಿಲ್ಲ; ಸರ್ವರಿಗೂ ಸಮಪಾಲು, ಸರ್ವರಿಗೂ ಸಮಬಾಳು ಎಂಬ ಸರ್ವಸಮಾನತೆಯ ವ್ಯವಸ್ಥೆಯನ್ನು ಜಾರಿಗೆ ತರುವುದರಿಂದ ಮಾತ್ರ ಎಂಬ ವಾಸ್ತವವನ್ನು ಈ ಕವನದಲ್ಲಿ ನಿರೂಪಿಸಿದ್ದಾರೆ.



# ೧೬. ಕಲಿಯುವವನು

**ಅನುವಾದ: ಕೆ.ಫಣಿರಾಜ್**

ಮೊದಲು ಮರಳ ಅಡಿಪಾಯದ ಮೇಲೆ ಕಟ್ಟಿದೆ
ನಂತರ ಕಲ್ಲಿನ ಅಡಿಪಾಯದ ಮೇಲೆ ಕಟ್ಟಿದೆ
ಕಲ್ಲಿನ ಅಡಿಪಾಯವೂ ಕುಸಿದ ನಂತರ
ತುಂಬಾ ಸಮಯ ನಾನು ಏನನ್ನೂ ಕಟ್ಟಲಿಲ್ಲ
ನಂತರ ಮರಳು ಕಲ್ಲೆನ್ನದೆ
ದೊರಕಿದ ಜಾಗದಲ್ಲಿ ಕಟ್ಟಿದೆ
ಈಗ ನಾನು ಕಟ್ಟುವುದ ಕಲಿತಿದ್ದೇನೆ

ಯಾರಿಗೆ ನಾನು ಅಧಿಕಾರ ಪತ್ರ ನೀಡಿದ್ದೆನೋ
ಅವರು ಅದನ್ನು ಬಿಸಾಡಿದರು
ಆದರೆ ನಾನು ಅಸಡ್ಡೆ ಮಾಡಿದವರು
ಅದನ್ನು ನನಗೆ ವಾಪಾಸು ತಂದುಕೊಟ್ಟರು
ಅದರಿಂದ ನಾನು ಕಲಿತೆ.

ನಾನಿತ್ತ ಆಜ್ಞೆ ಜಾರಿಯಾಗಲಿಲ್ಲ
ಖುದ್ದಾಗಿ ಹೋಗಿ ಕಂಡೆ
ಆಜ್ಞೆ ತಪ್ಪಾಗಿತ್ತು
ಸರಿಯಾದುದ್ದನ್ನು ಮಾಡಲಾಗಿತ್ತು
ಅದರಿಂದಲೂ ನಾನು ಕಲಿತೆ

ಗಾಯದ ಕಲೆಗಳು ಸುಖದಾಯಕವಲ್ಲ
ಇದೀಗ ಥಂಡಿ ಬೇರೆ
ನಾನು ಯಾವತ್ತೂ ಹೇಳುತ್ತಿರುತ್ತೇನೆ
ನಮಗೇನನ್ನೂ ಕಲಿಸದವು
ಗೋರಿಗಳು ಮಾತ್ರ.

**ವ್ಯಕ್ತಿಯು ತಾನು ಮಾಡುವ ಕೆಲಸದಲ್ಲಿ ಎಡೆಬಿಡದೆ ಪ್ರಯತ್ನಶೀಲನಾದಾಗ ಮತ್ತು ಇತರರೊಡನೆ ವ್ಯವಹರಿಸಲು ತೊಡಗಿದಾಗ ಜೀವನದಲ್ಲಿ ಯಾವುದು ಸರಿ–ಯಾವುದು ತಪ್ಪು; ಯಾವುದನ್ನು ಮಾಡಬೇಕು–ಯಾವುದನ್ನು ಮಾಡಬಾರದು ಎಂಬುದನ್ನು ನಿರಂತರವಾಗಿ ಕಲಿಯುತ್ತಿರುತ್ತಾನೆ ಎಂಬ ಸಂಗತಿಯನ್ನು ಈ ಕವನದಲ್ಲಿ ಹೇಳಲಾಗಿದೆ.**

ಕಲಿ=ನಿರಂತರವಾದ ಪ್ರಯತ್ನ ಮತ್ತು ದುಡಿಮೆಯಿಂದ ಅರಿವನ್ನು ಪಡೆಯುವುದು;

ಅಡಿಪಾಯ=ತಳಹದಿ; ಕಲ್ಲು+ಎನ್ನದೆ; ಎನ್ನದೆ=ಎಂದು ಬೇರೆ ಬೇರೆಯಾಗಿ ವಿಂಗಡಿಸದೆ;

ಮನೆಯನ್ನು ಕಟ್ಟುವುದಕ್ಕೆ ಮೊದಲು, ಅದಕ್ಕೆ ಅಡಿಪಾಯವನ್ನು ಹಾಕುವಾಗ ಮೊದಲು ಮರಳನ್ನು ಮಾತ್ರ ಬಳಸಿದೆ. ಅದು ಕುಸಿದು ಹೋದಾಗ, ಕೇವಲ ಕಲ್ಲು ದಿಂಡುಗಳನ್ನು ಉಪಯೋಗಿಸಿ ಕಟ್ಟಿದೆ. ಅವು ಒಂದಕ್ಕೊಂದು ಗಟ್ಟಿಯಾಗಿ ಕೂಡಿಕೊಂಡು ನಿಲ್ಲಲಾಗದೆ ಉರುಳಿದಾಗ, ಮರಳು ಮತ್ತು ಕಲ್ಲುಗಳ ಜತೆ, ಮಣ್ಣು ಮತ್ತು ನೀರನ್ನು ಬೆರಸಿ ಕಟ್ಟತೊಡಗಿದಾಗ ಅಡಿಪಾಯ ಗಟ್ಟಿಯಾಗಿ ನಿರ್ಮಾಣಗೊಂಡಿತು. ಈಗ ಇಂತಹ ಅಡಿಪಾಯದ ಮೇಲೆ ಎಂತಹ ಕಟ್ಟಡವನ್ನಾದರೂ ಕಟ್ಟುವಂತಹ ತಿಳುವಳಿಕೆ ಮತ್ತು ಕುಶಲತೆಯನ್ನು ನಾನು ಗಳಿಸಿಕೊಂಡಿದ್ದೇನೆ:

ಮಾನವನು ಸಾವಿರಾರು ವರುಶಗಳಿಂದಲೂ ನಿಸರ್ಗದ ಆಗುಹೋಗುಗಳ ಜತೆಜತೆಯಲ್ಲಿ ತನ್ನ ಉಳಿವಿಗಾಗಿ ಸೆಣೆಸಾಣುತ್ತ, ಬದುಕಿನಲ್ಲಿ ಏರಿಳಿತಗಳನ್ನು ಕಾಣುತ್ತ, ಪ್ರಗತಿಯ ದಾರಿಯಲ್ಲಿ ಅರಿವನ್ನು ಪಡೆಯುತ್ತ, ಶಿಲಾಯುಗದಿಂದ ಅಣುಯುಗಕ್ಕೆ ಅಡಿಯಿಟ್ಟು ಮುನ್ನಡೆಯುತ್ತಿರುವುದನ್ನು **“ಈಗ ನಾನು ಕಟ್ಟುವುದ ಕಲಿತಿದ್ದೇನೆ”** ಎಂಬ ನುಡಿಗಳು ಸೂಚಿಸುತ್ತವೆ;

ಅಧಿಕಾರ=ಆಡಳಿತದ ಹುದ್ದೆ; ಪತ್ರ=ಓಲೆ; ಅಧಿಕಾರ ಪತ್ರ=ವ್ಯಕ್ತಿಯು ವಿವೇಚನೆ ಮತ್ತು ಹೊಣೆಗಾರಿಕೆಯಿಂದ ಸ್ವತಂತ್ರವಾಗಿ ಕಾರ್ಯವನ್ನು ಮಾಡಲು ನೀಡುವ ಆದೇಶದ ಪತ್ರ;

ನೀಡು=ಕೊಡು; ಬಿಸಾಡು=ತೊರೆ/ತ್ಯಜಿಸು; ಅಸಡ್ಡೆ=ಕಡೆಗಣನೆ/ಉದಾಸೀನತೆ;

ಆಡಳಿತದ ಆದೇಶವನ್ನುಳ್ಳ ಬಹುಮುಖ್ಯವಾದ ಪತ್ರವೊಂದನ್ನು ಮತ್ತೊಬ್ಬರಿಗೆ ತಲುಪಿಸುವ ಜವಾಬ್ದಾರಿಯನ್ನು ನಾನು ಈತನೇ ಸರಿಯಾದ ವ್ಯಕ್ತಿ ಎಂದು ನಂಬಿ ಯಾರಿಗೆ ವಹಿಸಿದ್ದೆನೋ, ಆತ ಅದನ್ನು ಕಡೆಗಣಿಸಿ ಬಿಸಾಡಿದ್ದ. ಯಾರನ್ನು ನಾನು ಈ ಕಾರ್ಯವನ್ನು ಸರಿಯಾಗಿ ಮಾಡಲಾರ ಎಂದು ಕಡೆಗಣಿಸಿದ್ದನೋ, ಅವನೇ ಕಳೆದುಹೋಗಿದ್ದ ಪತ್ರವನ್ನು ನನಗೆ ತಂದುಕೊಟ್ಟು ಜವಾಬ್ದಾರಿಯುತವಾಗಿ ನಡೆದುಕೊಂಡಿದ್ದ;

ಜೀವನದಲ್ಲಿ ನಾವೆಲ್ಲರೂ ಕೆಲವರನ್ನು ಮಾತ್ರ ನಂಬಿಕೆಗೆ ಯೋಗ್ಯರೆಂದು, ಇನ್ನುಳಿದವರು ನಂಬಿಕೆಗೆ ಯೋಗ್ಯರಲ್ಲವೆಂಬ ನಿಲುವನ್ನು ತಳೆದಿರುತ್ತೇವೆ. ಇಂತಹ ನಿಲುವಿಗೆ ನಾವು ಅವರ ಜತೆಯಲ್ಲಿ ಪಡೆದಿರುವ ಕುಟುಂಬದ ನೆಂಟು, ಗೆಳೆತನದ ನೆಂಟು ಮತ್ತು ಇನ್ನಿತರ ನೆಂಟುಗಳು ಕಾರಣವಾಗಿರುತ್ತವೆ. ಕೆಲವೊಮ್ಮೆ ವ್ಯಕ್ತಿಯ ಬಹಿರಂಗದ ರೂಪ ಮತ್ತು ಉಡುಗೆತೊಡುಗೆಗಳನ್ನು ನೋಡಿಯೇ ಆ ವ್ಯಕ್ತಿ ಒಳ್ಳೆಯವನು ಇಲ್ಲವೇ ಕೆಟ್ಟವನು ಎಂಬ ನಿಲುವನ್ನು ತಳೆಯುತ್ತೇವೆ. ಈ ರೀತಿ ಯಾವುದೇ ವ್ಯಕ್ತಿಯನ್ನು ಸಂಪೂರ್ಣವಾಗಿ ನಂಬಿಕೊಳ್ಳುವುದಾಗಲಿ ಇಲ್ಲವೇ ಕಡೆಗಣಿಸುವುದಾಗಲಿ ಸರಿಯಲ್ಲವೆಂಬ ಅರಿವನ್ನು ಈ ಪ್ರಸಂಗವು ಸೂಚಿಸುತ್ತದೆ. ಏಕೆಂದರೆ ವ್ಯಕ್ತಿಗಳ ನಡೆನುಡಿ ಯಾವ ಗಳಿಗೆಯಲ್ಲಿ ಯಾವ ರೀತಿ ಇರಬಲ್ಲುದೆಂಬುದನ್ನು ಯಾರೊಬ್ಬರೂ ಮೊದಲೇ ಹೇಳುವುದಕ್ಕೆ ಆಗುವುದಿಲ್ಲವೆಂಬ ವಾಸ್ತವವನ್ನು ಅರಿತುಕೊಳ್ಳುವುದನ್ನು **“ಅದರಿಂದ ನಾನು ಕಲಿತೆ”** ಎಂಬ ನುಡಿಗಳು ಸೂಚಿಸುತ್ತವೆ;

ನಾನು+ಇತ್ತ; ಇತ್ತ=ಕೊಟ್ಟ/ನೀಡಿದ; ಆಜ್ಞೆ=ಅಪ್ಪಣೆ/ಆದೇಶ; ಜಾರಿ+ಆಗಲಿಲ್ಲ; ಜಾರಿ=ಆಚರಣೆ/ಕಾರ್ಯರೂಪಕ್ಕೆ ಬರುವುದು; ಖುದ್ದು=ತಾನಾಗಿ/ಸ್ವಂತ;

ಈ ರೀತಿಯೇ ಮಾಡಬೇಕು ಎಂದು ನಾನು ನೀಡಿದ್ದ ಆದೇಶವನ್ನು ನನ್ನ ಕಯ್ ಕೆಳಗಿನವರು ಕಾರ್ಯರೂಪಕ್ಕೆ ತಾರದೆ, ಜನಸಮುದಾಯಕ್ಕೆ ಹಾನಿಯನ್ನು ಉಂಟುಮಾಡುವಂತಿದ್ದ ಆದೇಶದಲ್ಲಿನ ತಪ್ಪನ್ನು ಗುರುತಿಸಿ, ಅದನ್ನು ಸರಿಪಡಿಸಿ ಆಚರಣೆಗೆ ತಂದಿದ್ದರು. ನನ್ನ ಅಪ್ಪಣೆಯನ್ನು ಏಕೆ ತಿರಸ್ಕರಿಸಿದರು ಎಂಬುದನ್ನು

ನಾನೇ ನೇರವಾಗಿ ಪರಿಶೀಲಿಸಿದಾಗ, ನಾನು ನೀಡಿದ್ದ ಆದೇಶ ತಪ್ಪಾಗಿತ್ತು ಎಂಬುದು ನನಗೆ ಮನದಟ್ಟಾಯಿತು. ಎಲ್ಲಾ ವಿಚಾರಗಳಲ್ಲಿಯೂ ನನ್ನ ತಿಳುವಳಿಕೆಯೇ ಯಾವಾಗಲೂ ಸರಿಯಾಗಿರುತ್ತದೆ ಎಂಬ ಅಹಂಕಾರ ಒಳ್ಳೆಯದಲ್ಲ ಎಂಬುದನ್ನು ತಿಳಿದುಕೊಳ್ಳುವ ಬಗೆಯನ್ನು **"ಅದರಿಂದಲೂ ನಾನು ಕಲಿತೆ"** ಎಂಬ ನುಡಿಗಳು ಸೂಚಿಸುತ್ತಿವೆ;

ಕಲೆ=ಮಚ್ಚೆ; ಗಾಯದ ಕಲೆ=ಯಾವುದೇ ಬಗೆಯ ಏಟು ಬಿದ್ದು, ದೇಹದ ಮೇಲಣ ತೊಗಲು ಹರಿದು, ರಕ್ತ ಸೋರಿ ಆಗಿದ್ದ ಗಾಯವು ಗುಣಗೊಂಡ ಮೇಲೆ, ದೇಹದ ಆ ಜಾಗದ ತೊಗಲಿನ ಬಣ್ಣ ಕಪ್ಪಾಗುತ್ತದೆ; ಸುಖದಾಯಕ+ಅಲ್ಲ; ಸುಖದಾಯಕ=ಆನಂದವನ್ನುಂಟುಮಾಡುವುದು;

**ಗಾಯದ ಕಲೆಗಳು ಸುಖದಾಯಕವಲ್ಲ**=ಈ ನುಡಿಗಳು ಒಂದು ರೂಪಕವಾಗಿ ಬಳಕೆಗೊಂಡವೆ. ಜೀವನದಲ್ಲಿ ನಡೆದ ಕಹಿಪ್ರಸಂಗಗಳಿಂದ ದೇಹ ಮತ್ತು ಮನಸ್ಸು ಗಾಸಿಗೊಂಡಿರುತ್ತವೆ. ಅವನ್ನು ಮತ್ತೆ ಮತ್ತೆ ನೆನಪಿಸಿಕೊಳ್ಳುವುದರಿಂದ ಮನಸ್ಸಿನ ನೆಮ್ಮದಿ ಕೆಡುತ್ತದೆ. ಆದ್ದರಿಂದ ಕಹಿನೆನಪುಗಳಿಂದ ದೂರವಿರಬೇಕೆಂಬ ಬುದ್ಧಿಯನ್ನು ಕಲಿತೆನು;

ಇದು+ಈಗ; ಥಂಡಿ=ತುಂಬಾ ಚಳಿ/ಕೊರೆಯುವ ಚಳಿ;

**ಇದೀಗ ಥಂಡಿ ಬೇರೆ**=ಈ ನುಡಿಗಟ್ಟು ಒಂದು ರೂಪಕವಾಗಿ ಬಳಕೆಗೊಂಡಿದೆ. ಈಗ ಅತ್ಯಂತ ಸಂಕಟದ ಕಾಲದಲ್ಲಿ ಜನಸಮುದಾಯದ ಜೀವನವು ಜರ್ಜರಿತಗೊಂಡಿದೆ;

ಗೋರಿ=ಹೆಣವನ್ನು ಹೂಳಿದ ಜಾಗದಲ್ಲಿ, ವ್ಯಕ್ತಿಯ ನೆನಪಿಗಾಗಿ ಕಟ್ಟಿರುವ ಗದ್ದುಗೆ; ಗೋರಿಯು ಗತಕಾಲದ ಕಹಿ ನೆನಪುಗಳಿಗೆ ಒಂದು ಸಂಕೇತವಾಗಿ ಬಳಕೆಯಾಗಿದೆ; ನಮಗೆ+ಏನನ್ನೂ; ಏನನ್ನೂ=ಯಾವುದನ್ನೂ;

**ನಾನು ಯಾವತ್ತೂ ಹೇಳುತ್ತಿರುತ್ತೇನೆ... ನಮಗೇನನ್ನೂ ಕಲಿಸದವು... ಗೋರಿಗಳು ಮಾತ್ರ=ಈ** ನುಡಿಗಳು ರೂಪಕದ ತಿರುಳಿನಲ್ಲಿ ಬಳಕೆಗೊಂಡಿವೆ. ಗತಕಾಲದಲ್ಲಿ ನಡೆದ ಕಹಿ ಪ್ರಸಂಗಗಳನ್ನು ನೆನೆನೆನೆದುಕೊಂಡು ಪರಿತಪಿಸುವುದರಿಂದ ಜೀವನದಲ್ಲಿ ನಾವು ಏನನ್ನೂ ಕಲಿಯುವುದಿಲ್ಲ. ನಮ್ಮ ಪರಿಶ್ರಮದ ದುಡಿಮೆ ಮತ್ತು ಸಹಮಾನವರ ಜತೆಯಲ್ಲಿ ವ್ಯವಹರಿಸುವುದರ ಮೂಲಕ ನಾವು ವರ್ತಮಾನದಲ್ಲಿ ಬದುಕನ್ನು ಒಳ್ಳೆಯ ರೀತಿಯಲ್ಲಿ ರೂಪಿಸಿಕೊಂಡು ಬಾಳುವುದನ್ನು ಕಲಿಯಬೇಕು ಎಂಬುದನ್ನು ಈ ನುಡಿಗಳು ಸೂಚಿಸುತ್ತಿವೆ; ❖

# ೧೭. ಫಿನ್ಲ್ಯಾಂಡ್ ೧೯೪೦

**ಅನುವಾದ: ಕೆ.ಫಣಿರಾಜ್**

**1**

ನಾವೀಗ ನಿರಾಶ್ರಿತರಾಗಿ
ಫಿನ್ಲ್ಯಾಂಡಿನಲ್ಲಿದ್ದೇವೆ

ನನ್ನ ಪುಟ್ಟ ಮಗಳು
ಸಂಜೆ ಮನೆಗೆ ಬಂದವಳೇ ದೂರುತ್ತಾಳೆ
ತನ್ನನ್ನು ಮಕ್ಕಳು ಆಟಕ್ಕೆ ಸೇರಿಸಿಕೊಳ್ಳೋಲ್ಲ
ಇವಳು ಜರ್ಮನಿಯವಳು. ಕೇಡಿಗಳ ನಾಡಿನವಳು

ವಾಗ್ವಾದ ಮಾಡುವಾಗ
ನಾನು ದನಿ ಎತ್ತರಿಸಿದರೆ
ಇಲ್ಲಿಯ ಜನ ಮೆತ್ತಗೆ ಮಾತಾಡಲು ಹೇಳುತ್ತಾರೆ
ಕೇಡಿಗಳ ನಾಡಿಂದ ಬಂದವನು
ದನಿ ಎತ್ತರಿಸುವುದು ಇಲ್ಲಿನವರಿಗೆ ರುಚಿಸದು

ಜರ್ಮನಿ ಕೇಡಿಗಳ ನಾಡಲ್ಲವೇ ಪುಟ್ಟಿ
ಕೇಡಿಗಳ ನಾಡೆಂದರೆ ಯಾರಿಗೆ ಅಕ್ಕರೆ ಹೇಳು
ಎಂದು ರಮಿಸಿದಾಗ
ಅವಳಿಗೆ ಸಮಾಧಾನವಾಗುತ್ತದೆ
ಇಬ್ಬರೂ ಖುಷಿಯಿಂದ ನಗುತ್ತೇವೆ

**2**

ರೈತಾಪಿ ಕುಟುಂಬದ ಕುಡಿ ನಾನು
ರೊಟ್ಟಿಯನು ಬಿಸಾಡುವುದ ಕಂಡರೆ
ನನಗೆ ರೇಗುತ್ತದೆ
ಯುದ್ಧವನ್ನು ನಾನು ಯಾಕಿಷ್ಟು
ದ್ವೇಷಿಸುವೆನೆಂದು ನಿಮಗೆ ಅರ್ಥವಾಗಿರಬೇಕು

**3**

ಗೆಳೆಯರ ಕೂಟದಲ್ಲಿ ವೈನ್ ಕುಡಿಯುತ್ತಿರುವಾಗ
ಫಿನ್ಲ್ಯಾಂಡಿನ ಗೆಳತಿ
ಯುದ್ಧ ತನ್ನ ದ್ರಾಕ್ಷಿ ತೋಟವನ್ನು
ಹಾಳುಗೆಡವಿರುವ ಬಗೆ ವಿವರಿಸಿದಳು
ನಾವೀಗ ಕುಡಿಯುತ್ತಿರುವ ವೈನ್
ಆ ತೋಟದ್ದೇ ಎಂದು ಹೇಳಿದಳು
ನಾವು ದ್ರಾಕ್ಷಿ ತೋಟಕ್ಕೆ
ವಿವೇಚನೆಗೆ
ವಂದಿಸಿ ವೈನ್ ಕುಡಿದೆವು

**4**

ಜನರ ಬಾಯಲ್ಲುಳಿಯುವ ವರ್ಷವಿದು
ಜನ ಬಾಯಲ್ಲಾಡಲು ಹಿಂಜರೆವ ವರ್ಷವಿದು

ಮುಪ್ಪಾದವರ ಎದುರೇ ಹರೆಯದವರ ಸಾವು
ವಿವೇಕಿಗಳ ಅಳಿವು ಮೂರ್ಖರ ಉಳಿವು

ಭೂಮಿಯಿನ್ನು ಏನನ್ನೂ ಬೆಳೆಯದು
ಅದಕ್ಕೀಗ ನುಂಗುವ ದಾಹ
ಆಕಾಶದಿಂದಿನ್ನು ಮಳೆ ಸುರಿಯದು
ಸುರಿವುದು ಬರಿ ಲೋಹ.

**ಸರ್ವಾಧಿಕಾರಿ ಅಡಾಲ್ಫ್ ಹಿಟ್ಲರನ ಆಡಳಿತ ಕಾಲದಲ್ಲಿ ಬ್ರೆಕ್ಟ್ ಅವರು ಜರ್ಮನಿಯನ್ನು ತೊರೆದು ಫಿನ್ಲ್ಯಾಂಡ್ ದೇಶದಲ್ಲಿ ನೆಲೆಸಿದ್ದಾಗ, ತಮ್ಮ ಜೀವನದಲ್ಲಿ ಕಂಡುಂಡ ಹಲವು ಕಹಿ ಪ್ರಸಂಗಗಳನ್ನು ಈ ಕವನದಲ್ಲಿ ಚಿತ್ರಿಸಿದ್ದಾರೆ.**

ನಾವು+ಈಗ; ನಿರಾಶ್ರಿತ=ಹುಟ್ಟಿ ಬೆಳೆದು ಬಾಳುತ್ತಿದ್ದ ತಾಯ್ನಾಡಿನ ನೆಲೆಯನ್ನು ಕಳೆದುಕೊಂಡು ಮತ್ತೊಂದು ನಾಡಿನಲ್ಲಿ ತಾತ್ಕಾಲಿಕವಾಗಿ ಆಶ್ರಯವನ್ನು ಪಡೆದವನು; ಫಿನ್ಲ್ಯಾಂಡ್=ಉತ್ತರ ಯುರೋಪಿನ ಒಂದು ದೇಶ;

**ನಾವೀಗ ನಿರಾಶ್ರಿತರಾಗಿ ಫಿನ್ಲ್ಯಾಂಡಿನಲ್ಲಿದ್ದೇವೆ**=೧೯೩೩ರಲ್ಲಿ ಬ್ರೆಕ್ಟ್ ಅವರು ತಮ್ಮ ತಾಯ್ನಾಡಾದ ಜರ್ಮನಿಯಿಂದ ತಲೆತಪ್ಪಿಸಿಕೊಂಡು ತಮ್ಮ ಹೆಂಡತಿ ಮತ್ತು ಮಕ್ಕಳೊಡನೆ ಕೆಲವು ವರುಶಗಳ ಕಾಲ ಆಸ್ಟ್ರಿಯಾ, ಸ್ವಿಟ್ವಜರ್ಲೆಂಡ್, ಪ್ರಾನ್ಸ್, ಡೆನ್ಮಾರ್ಕ್ ದೇಶಗಳಲ್ಲಿ ಆಶ್ರಯವನ್ನು ಪಡೆದಿದ್ದು, ಈ ದೇಶಗಳು ನಾಜಿ ಪಡೆಗಳ ಆಕ್ರಮಣಕ್ಕೆ ಒಳಗಾಗುತ್ತಿದ್ದಂತೆ, ಅಲ್ಲಿಂದ ಹೊರಟು, ಇದೀಗ ಅಂದರೆ ೧೯೪೦ ರಲ್ಲಿ ಫಿನ್ಲ್ಯಾಂಡ್ ದೇಶಕ್ಕೆ ಬಂದು ನೆಲೆಸಿದ್ದಾರೆ.

೧೯೩೩ ರಿಂದ ೧೯೪೫ರ ವರೆಗೆ ಜರ್ಮನಿಯನ್ನು ಆಳಿದ ನಿರಂಕುಶಾಧಿಕಾರಿ ಅಡಾಲ್ಫ್ ಹಿಟ್ಲರನ ಕಾಲದಲ್ಲಿ ಲಕ್ಷಾಂತರ ಮಂದಿ ಯಹೂದಿಗಳು ಜನಾಂಗ ಹಗೆತನಕ್ಕೆ ಗುರಿಯಾಗಿ ಆರ್ಯನ್ ಜನಾಂಗದ ನಾಜಿ ಪಡೆಯಿಂದ ಅತ್ಯಾಚಾರ, ಕೊಲೆ ಸುಲಿಗೆಗೆ ಬಲಿಯಾಗುತ್ತಿದ್ದರು.

೧೯೨೦ರ ದಶಕದಲ್ಲಿ ಹಿಟ್ಲರನ ನಾಯಕತ್ವದಲ್ಲಿ ಆರಂಭಗೊಂಡ ಕಾರ್ಮಿಕರ ರಾಷ್ಟ್ರೀಯ ಸಮಾಜವಾದಿ ಪಕ್ಷ– National Socialist Party of Workers ಎಂಬ ಒಕ್ಕೂಟವೇ ನಾಜಿ ಪಕ್ಷವೆಂಬ ಜರ್ಮನ್ ಹೆಸರನ್ನು ಪಡೆಯಿತು. ನಾಜಿ ಪಕ್ಷದ ಮೂಲ ಸಿದ್ಧಾಂತವೆಂದರೆ **“ಜಗತ್ತಿನಲ್ಲಿ ಆರ್ಯನ್ ಜನಾಂಗವೇ ಅತ್ಯುತ್ತುಮವಾದುದು. ಇಡೀ ಜಗತ್ತನ್ನು ಆರ್ಯನ್ ಜನಾಂಗದವರು ಮಾತ್ರ ಆಳುವಂತಾಗಬೇಕು. ಯಹೂದಿ ಜನಾಂಗವನ್ನು ಸಂಪೂರ್ಣವಾಗಿ ಕಗ್ಗೊಲೆ ಮಾಡಬೇಕು. ಜಗತ್ತಿನಲ್ಲಿರುವ ಇನ್ನಿತರ ಜನಾಂಗಗಳು ಆರ್ಯನ್ ಜನಾಂಗಕ್ಕೆ ಅಡಿಯಾಳುಗಳಾಗಿರಬೇಕು. ಇದಕ್ಕಾಗಿ ಯಾವ ಬಗೆಯ ಹಿಂಸಾಚಾರವನ್ನು ಮಾಡಲು ಹಿಂಜರಿಯಬಾರದು.”**

ಹಿಟ್ಲರನ ಸರ್ವಾಧಿಕಾರತ್ವ ಮತ್ತು ಜನಾಂಗ ಹಗೆತನದ ಸಿದ್ಧಾಂತದ ನಾಜಿ ಒಕ್ಕೂಟವನ್ನು ಬ್ರೆಕ್ಟ್ ಅವರು ವಿರೋಧಿಸುತ್ತ, ಜರ್ಮನಿ ಮಾತ್ರವಲ್ಲ... ಇಡೀ ಜಗತ್ತಿನಲ್ಲಿ ದುಡಿಯುತ್ತಿರುವ ಶ್ರಮಜೀವಿಗಳೆಲ್ಲರೂ ಜೀವನಕ್ಕೆ ಅತ್ಯಗತ್ಯವಾದ

ಅನ್ನ, ಬಟ್ಟೆ, ವಸತಿ, ವಿದ್ಯೆ, ಆರೋಗ್ಯವನ್ನು ಪಡೆದು, **"ಸರ್ವರಿಗೂ ಸಮಪಾಲು; ಸರ್ವರಿಗೂ ಸಮಬಾಳು"** ಎಂಬ ಸಮತಾವಾದದ ಸಿದ್ಧಾಂತಕ್ಕೆ ಅನುಗುಣವಾಗಿ ಬಾಳುವಂತಾಗಬೇಕೆಂಬ ವಿಚಾರಗಳನ್ನು ತಮ್ಮ ಕವನ, ಕತೆ, ನಾಟಕಗಳ ಮೂಲಕ ಪ್ರತಿಪಾದಿಸುತ್ತ, ಒಟ್ಟು ಮಾನವ ಸಮುದಾಯದ ಒಳಿತಿಗಾಗಿ ನಡೆಯುತ್ತಿದ್ದ ಹೋರಾಟಗಳಲ್ಲಿ ಕ್ರಿಯಾಶೀಲರಾಗಿದ್ದರು. ಆದ್ದರಿಂದ ನಾಜಿ ತಂಡ ಪಟ್ಟಿಮಾಡಿದ್ದ ಯಹೂದಿಗಳ ಕೊಲೆಯಲ್ಲಿ ಬ್ರೆಕ್ಟ್ ಅವರ ಹೆಸರು ಮೊದಲ ಪುಟದಲ್ಲಿತ್ತು.

## ಪ್ರಸಂಗ–೧

ಪುಟ್ಟ=ಚಿಕ್ಕ; ದೂರು=ವ್ಯಕ್ತಿಯು ತನಗಿರುವ ತೊಂದರೆಯನ್ನು ತಿಳಿಸಿ, ಪರಿಹಾರಕ್ಕಾಗಿ ನೆರವನ್ನು ಕೇಳುವುದು/ಅಹವಾಲು/ಮನವಿ; ಕೇಡಿ=ಕೆಡುಕನ್ನು ಮಾಡುವವನು/ಸಾವು ನೋವನ್ನುಂಟುಮಾಡುವವನು/ಹಾಳು ಮಾಡುವವನು; ನಾಡು=ದೇಶ/ಪ್ರಾಂತ್ಯ;

**ಕೇಡಿಗಳ ನಾಡು**=ಜನಾಂಗದ ಹೆಸರಿನಲ್ಲಿ ಹಗೆತನವನ್ನು ಆರ್ಯನ್ನರ ಮಯ್ ಮನದಲ್ಲಿ ತುಂಬಿ, ಆರ್ಯನ್ ಜನಸಮುದಾಯವನ್ನು ಯಹೂದಿಗಳ ಎದುರು ಎತ್ತಿಕಟ್ಟಿ, ಯಹೂದಿಗಳನ್ನು ನಂಜಿನ ಅನಿಲ ತುಂಬಿದ ಗ್ಯಾಸ್ ಚೇಂಬರ್ ಗಳಲ್ಲಿ ಕೊಲ್ಲುತ್ತಿರುವ, ಗುಂಡಿನ ಸುರಿಮಳೆಯಿಂದ ಯಹೂದಿಗಳನ್ನು ಸಾಮೂಹಿಕವಾಗಿ ಹತ್ಯೆ ಮಾಡುತ್ತಿರುವ, ಯೆಹೂದಿ ಜನಾಂಗಕ್ಕೆ ಸೇರಿದ ಮಕ್ಕಳು ಹೆಂಗಸರನ್ನು ಕ್ರೂರರೀತಿಯಲ್ಲಿ ಹಿಂಸಿಸುತ್ತ ನಾಶಮಾಡುತ್ತಿರುವ ನಾಜಿ ಪಡೆಗಳಿಂದ ತುಂಬಿರುವ ಜರ್ಮನಿ ಎಂಬ ನಾಡು;

ಒಂದು ಸಂಜೆ ಆಟವಾಡಲೆಂದು ಹೋಗಿದ್ದ ಬ್ರೆಕ್ಟ್ ಅವರ ಚಿಕ್ಕ ಮಗಳು ನೀನು ಕೇಡಿಗಳ ನಾಡಿನಿಂದ ಬಂದವಳು ಎಂದು ಫಿನ್ಲ್ಯಾಂಡಿನ ಮಕ್ಕಳು ತನ್ನನ್ನು ಆಟಕ್ಕೆ ಸೇರಿಸಿಕೊಳ್ಳುತ್ತಿಲ್ಲ ಎಂದು ಅಳಲನ್ನು ಹೇಳಿಕೊಂಡಾಗ, ಬ್ರೆಕ್ಟ್ ಅವರಿಗೆ ಜನಾಂಗ ಹಗೆತನದ ನಂಜು ಕೇವಲ ಜರ್ಮನಿಯನ್ನು ಮಾತ್ರವಲ್ಲ, ಇತರ ನಾಡು ಗಳಲ್ಲಿಯೂ ಹಬ್ಬುತ್ತಿರುವುದು ಕಂಡುಬರುತ್ತದೆ. ಫಿನ್ನಿಶ್ ಜನಸಮುದಾಯದ ಮಕ್ಕಳ ಮನದಲ್ಲಿಯೂ ಯಹೂದಿಗಳ ಈ ಬಗೆಯ ಕೆಟ್ಟ ಭಾವನೆಯು ಹಬ್ಬಿರುವುದನ್ನು ತಿಳಿದು ಹತಾಶರಾಗುತ್ತಾರೆ;

ವಾಗ್ವಾದ=ಚರ್ಚೆ/ಯಾವುದೇ ಒಂದು ಸಂಗತಿಯಲ್ಲಿನ ಸರಿ–ತಪ್ಪನ್ನು ಒರೆಹಚ್ಚಿ ನೋಡುವಾಗ ಇತರರೊಡನೆ ಆಡುವ ಮಾತುಗಳು; ದನಿ=ಸದ್ದು/ಶಬ್ದ;

ದನಿ ಎತ್ತರಿಸು=ಇದೊಂದು ನುಡಿಗಟ್ಟು. ವ್ಯಕ್ತಿಯು ತನ್ನ ನಿಲುವು ಸರಿಯೆಂದು ಹೇಳುವಾಗ ದೊಡ್ಡದನಿಯಲ್ಲಿ ಮಾತನಾಡುವುದು; ರುಚಿಸು=ಮೆಚ್ಚಿಗೆಯಾಗು/ಮನಸ್ಸಿಗೆ ಹಿಡಿಸು; ರುಚಿಸದು=ಇಷ್ಟವಾಗುವುದಿಲ್ಲ;

ಮಕ್ಕಳ ನಡುವೆ ತಮ್ಮ ಮಗಳಿಗೆ ಆದ ಅಪಮಾನದ ರೀತಿಯಲ್ಲಿಯೇ ತಮಗೂ ಆದುದನ್ನು ಬ್ರೆಕ್ಟ್ ನೆನಪಿಸಿಕೊಳ್ಳುತ್ತಾರೆ. ಫಿನ್ಲ್ಯಾಂಡಿನ ಜನರೊಡನೆ ಯಾವುದಾದರೊಂದು ಸಂಗತಿಯನ್ನು ಕುರಿತು ಚರ್ಚಿಸುತ್ತ, ತಮ್ಮ ನಿಲುವನ್ನು ಪ್ರತಿಪಾದಿಸುತ್ತಿದ್ದಾಗ, ತಮ್ಮ ಕೊರಳಿನಿಂದ ದನಿಯು ತುಸು ಜೋರಾಗಿ ಹೊರಹೊಮ್ಮಿದರೆ, ಅದರ ಬಗ್ಗೆ ಫಿನ್ನಿಶ್ ಜನರು ತಮ್ಮ ಅಸಹನೆಯನ್ನು ವ್ಯಕ್ತಪಡಿಸುತ್ತಿದ್ದರು. ತಾಯ್ನಾಡಿನಿಂದ ದೂರವಾದ ನಿರಾಶ್ರಿತರು ಹೆಜ್ಜೆಹೆಜ್ಜೆಗೂ ಒಂದಲ್ಲ ಒಂದು ಬಗೆಯ ಅನುಮಾನ, ತಿರಸ್ಕಾರ ಮತ್ತು ಅಪಮಾನಕ್ಕೆ ಗುರಿಯಾಗಿ ನರಳಬೇಕಾಗುವುದನ್ನು ಬೇರೆ ಬೇರೆ ದೇಶಗಳಲ್ಲಿ ಸುಮಾರು ಹದಿನಾಲ್ಕು ವರುಶಗಳ ಕಾಲ ಆಶ್ರಯ ಪಡೆದಿದ್ದಾಗ ಬ್ರೆಕ್ಟ್ ಅನುಭವಿಸುತ್ತಿದ್ದರು;

ಪುಟ್ಟಿ=ಒಲವಿನಿಂದ ಮಗಳನ್ನು ಕರೆಯುತ್ತಿರುವ ಪದ; ನಾಡು+ಎಂದರೆ; ಅಕ್ಕರೆ=ಪ್ರೀತಿ/ಒಲವು/ಮೆಚ್ಚುಗೆ; ರಮಿಸು=ಸಂತಯಿಸು/ಆತಂಕವನ್ನು ಹೋಗಲಾಡಿಸು; ಖುಷಿ=ಹಿಗ್ಗು/ಆನಂದ;

ಜರ್ಮನಿಯಲ್ಲಿ ನಾಜಿ ಒಕ್ಕೂಟದಿಂದ ನಡೆಯುತ್ತಿರುವ ಹಿಂಸಾಚಾರದಿಂದ ತಮ್ಮ ತಾಯ್ನಾಡಾದ ಜರ್ಮನಿಗೆ ಕೇಡಿಗಳ ನಾಡು ಎಂಬ ಹೆಸರು ಸಹಜವಾಗಿ ಬಂದಿದೆಯಾದ್ದರಿಂದ, ಯಾರಿಗೆ ತಾನೆ ಜರ್ಮನಿಯ ಬಗ್ಗೆ ಒಳ್ಳೆಯ ಭಾವನೆಯು ಹೇಗೆ ಬರುತ್ತದೆ ಎಂದು ತಮ್ಮ ಚಿಕ್ಕ ಮಗಳಿಗೆ ಬ್ರೆಕ್ಟ್ ಪ್ರಶ್ನೆಯನ್ನು ಹಾಕಿದಾಗ, ಆಕೆಯು ಅದನ್ನು ಒಪ್ಪಿಕೊಂಡು, ಓರಿಗೆಯ ಮಕ್ಕಳಿಂದ ಉಂಟಾಗಿದ್ದ ನೋವನ್ನು ಅರಗಿಸಿಕೊಳ್ಳುತ್ತಾಳೆ. ಈ ರೀತಿ ಅಪ್ಪ ಮತ್ತು ಮಗಳು ಕಟು ವಾಸ್ತವವನ್ನು ಅರಿತುಕೊಂಡು ಫಿನ್ಲ್ಯಾಂಡಿನಲ್ಲಿ ಉಂಟಾದ ಕಹಿಯನ್ನು ಮರೆತು ನೋವಿನಲ್ಲೂ ನಗುತ್ತಾರೆ;

## ಪ್ರಸಂಗ–೨

ರೈತಾಪಿ=ಬೇಸಾಯಗಾರರ; ಕುಟುಂಬ=ಮನೆತನ; ಕುಡಿ=ಚಿಗುರು/ಒಕ್ಕಲು; ರೊಟ್ಟಿ=ಉಣ್ಣುವ ತಿನ್ನುವ ಕುಡಿಯುವ ಆಹಾರ/ಉಣಿಸು ತಿನಸು; ರೇಗು=ಕೋಪಗೊಳ್ಳು/ಕೆರಳು/ಸಿಟ್ಟು;

ಜರ್ಮನಿ ದೇಶದ ಬವೇರಿಯಾ ಪ್ರಾಂತ್ಯದ ಆಗ್ಸ್ ಬರ್ಗ್ ಎಂಬ ಊರಿನಲ್ಲಿ ೧೮೯೮ರಲ್ಲಿ ಬ್ರೆಕ್ಟ್ ಹುಟ್ಟಿ ಬೆಳೆದರು.ಆಗ ಆಗ್ಸ್ ಬರ್ಗ್ ಊರಿನ ಪರಿಸರ ಬೇಸಾಯಗಾರರಿಂದ ತುಂಬಿತ್ತು. ಬೆಳೆಗಳನ್ನು ಬೆಳೆಯಬೇಕಾದರೆ ಬೇಸಾಯಗಾರರು ಚಳಿ ಮಳೆ ಗಾಳಿ ಬಿಸಿಲಿನಲ್ಲಿ ಹಗಲು ಇರುಳೆನ್ನದೆ ದುಡಿಯುತ್ತಿದ್ದುದನ್ನು ಬಾಲ್ಯದಲ್ಲಿ ಬ್ರೆಕ್ಟ್ ಕಣ್ಣಾರೆ ಕಂಡಿದ್ದರು. ಬೆಳೆಯುವ ಒಂದೊಂದು ಕಾಳಿನಲ್ಲಿಯೂ ಬೇಸಾಯಗಾರರ ಬೆವರ ಹನಿ ಮತ್ತು ಅವರ ಬದುಕನ್ನೇ ತೇಯ್ದ ಪರಿಶ್ರಮವಿದ್ದುದನ್ನು ಗಮನಿಸಿದ್ದರು. **"ಮಾನವ ಸಮುದಾಯ ಉಳಿದು ಬೆಳೆದು ಬಾಳುತ್ತಿರಬೇಕಾದರೆ ದುಡಿಯುವ ಶ್ರಮಜೀವಿಗಳಾದ ಬೇಸಾಯಗಾರರೇ ಕಾರಣ"**ವೆಂಬ ವಾಸ್ತವವನ್ನು ಬ್ರೆಕ್ಟ್ ಅರಿತಿದ್ದರು. ಆದ್ದರಿಂದಲೇ ಯಾರಾದರೂ ಉಣಿಸು ತಿನಸನ್ನು ಹಾಳುಮಾಡಿದರೆ ಬ್ರೆಕ್ಟ್ ಅಂತಹವರ ಬಗ್ಗೆ ಕೋಪದಿಂದ ಕೆರಳಿ, ಆಹಾರವನ್ನು ಪೋಲು ಮಾಡದಂತೆ ಎಚ್ಚರಿಸುತ್ತಿದ್ದರು.

೧೯೧೪-೧೮ರವರೆಗೆ ನಡೆದಿದ್ದ ಮೊದಲನೆಯ ಮಹಾಯುದ್ಧದಲ್ಲಿ ಸೇನಾ ಶಿಬಿರವೊಂದರಲ್ಲಿ ಗಾಯಾಳುಗಳನ್ನು ಉಪಚರಿಸುವ ವೈದ್ಯಕೀಯ ಕೆಲಸದಲ್ಲಿ ಬ್ರೆಕ್ಟ್ ಅವರು ತೊಡಗಿದ್ದರು. ಆಗ ರಣರಂಗದಲ್ಲಿ ಮದ್ದುಗುಂಡುಗಳ ಹೊಡೆತಕ್ಕೆ ಸಿಲುಕಿ ಚಿದ್ರಚಿದ್ರಗೊಂಡ ಅಂಗಾಂಗಗಳಿಂದ ನರಳುತ್ತಿರುವ ಸಾವಿರಾರು ಸೈನಿಕರ ಅಸಹನೀಯವಾದ ಯಾತನೆಯನ್ನು ಕಂಡಿದ್ದ ಬ್ರೆಕ್ಟ್ ಅವರಿಗೆ **"ಯುದ್ಧವೆನ್ನುವುದು ಮಾನವರ ಪ್ರಾಣವನ್ನು ಮಾತ್ರ ತೆಗೆಯುವುದಿಲ್ಲ; ಮಾನವ ಸಮುದಾಯವು ಪರಿಶ್ರಮದಿಂದ ರೂಪಿಸಿದ ಮತ್ತು ಕಟ್ಟಿದ ವಸ್ತುಗಳೆಲ್ಲವನ್ನೂ ನಾಶಪಡಿಸಿ, ಮಾನವ ಸಮುದಾಯದ ಬದುಕನ್ನೇ ದುರಂತದ ಕಡೆಗೆ ದೂಡುತ್ತದೆ"** ಎಂಬ ವಾಸ್ತವದ ಅರಿವಾಗಿತ್ತು.

೧೯೩೯ರಿಂದ ಮತ್ತೆ ಎರಡನೆಯ ಮಹಾಯುದ್ಧ ಪ್ರಾರಂಭವಾಗಿತ್ತು. ಫ್ರಾನ್ಸ್-ಇಂಗ್ಲೆಂಡ್-ಅಮೆರಿಕ-ರಶ್ಯ ದೇಶಗಳ ಸೇನೆಗಳು ಒಗ್ಗೂಡಿ ಜರ್ಮನಿ-ಜಪಾನ್-ಇಟಲಿ ದೇಶಗಳ ಸೇನೆಗಳ ಎದುರು ಹೋರಾಡತೊಡಗಿ, ಯುರೋಪಿನ ಆದ್ಯಂತ ಹಿಂಸಾಚಾರ ಕ್ರೂರವಾದ ರೀತಿಯಲ್ಲಿ ಹರಡಿತ್ತು. ನಿಸರ್ಗದ ಸಂಪತ್ತನ್ನು ಮತ್ತು ಮಾನವನ ಪ್ರಾಣ ಹಾಗೂ ಮಾನವನು ತನ್ನ ಜಾಣ್ಮೆ, ಕುಶಲತೆ ಮತ್ತು ಪರಿಶ್ರಮದಿಂದ ರೂಪಿಸಿದ ಜಗತ್ತನ್ನು ನಾಶಮಾಡುವ ಯುದ್ಧವನ್ನು ಬ್ರೆಕ್ಟ್ ತಮ್ಮ ಜೀವನದ ಉದ್ದಕ್ಕೂ ಸದಾಕಾಲ ವಿರೋಧಿಸುತ್ತಿದ್ದರು.

## ಪ್ರಸಂಗ–೩

ವೈನ್=ದ್ರಾಕ್ಷಿಯ ಹಣ್ಣುಗಳಿಂದ ತಯಾರಿಸಿರುವ ರಸ; ವಿವೇಚನೆ=ಸರಿ/ತಪ್ಪುಗಳನ್ನು ಒರೆಹಚ್ಚಿ ನೋಡಿ, ಕೆಟ್ಟದ್ದನ್ನು ಗುರುತಿಸಿ ದೂರಸರಿಯುವ ಮತ್ತು ಒಳ್ಳೆಯದನ್ನು ಅರಿತು ಬಾಳುವ ತಿಳುವಳಿಕೆ; ವಂದಿಸಿ=ನಮಸ್ಕರಿಸಿ;

ಗೆಳೆಯರ ಕೂಟದಲ್ಲಿ ವೈನ್ ಕುಡಿಯುತ್ತಿರುವಾಗ ಫಿನ್ಲ್ಯಾಂಡಿನ ಗೆಳತಿಯೊಬ್ಬಳು ಎರಡನೆಯ ಮಹಾಯುದ್ಧದ ಹೋರಾಟ ತನ್ನ ದೇಶಕ್ಕೂ ಹಬ್ಬಿ ದ್ರಾಕ್ಷಿ ತೋಟವನ್ನು ಹಾಳುಗೆಡವಿರುವುದನ್ನು ವಿವರಿಸಿದಳು. ನಾವೀಗ ಕುಡಿಯುತ್ತಿರುವ ವೈನ್ ಆ ತೋಟದ್ದೇ ಎಂದು ಹೇಳುತ್ತ, ಯುದ್ದವು ಮಾನವ ಸಮುದಾಯದ ಅನ್ನವನ್ನು ಕಸಿಯುತ್ತಿರುವುದ ಬಗ್ಗೆ ತನ್ನ ಸಂಕಟವನ್ನು ತೋಡಿಕೊಂಡಳು.ವೈನ್ ಕುಡಿಯಲು ಕಾರಣವಾದ ದ್ರಾಕ್ಷಿ ತೋಟಕ್ಕೆ ಮತ್ತು ಯುದ್ಧವೆಂಬುದು ಕೆಟ್ಟದ್ದು ಎಂಬ ವಾಸ್ತವವನ್ನು ಅರಿತುಕೊಂಡ ವಿವೇಚನೆಯ ಮಾತುಕತೆಗೆ ವಂದಿಸುತ್ತ ನಾವು ವೈನ್ ಕುಡಿದೆವು;

## ಪ್ರಸಂಗ–೪

ಬಾಯಲ್ಲಿ+ಉಳಿಯುವ; ಜನರ ಬಾಯಲ್ಲಿ ಉಳಿಯುವುದು=ಇದೊಂದು ನುಡಿಗಟ್ಟು. ಜಗತ್ತಿನಲ್ಲಿ ಆಗುತ್ತಿರುವ ಪ್ರಸಂಗಗಳನ್ನು ಜನಸಮುದಾಯ ನೆನಪನಲ್ಲಿಟ್ಟುಕೊಂಡು ಮತ್ತೆ ಮತ್ತೆ ಮುಂದಿನ ತಲೆಮಾರುಗಳಲ್ಲಿ ಮಾತನಾಡಿಕೊಳ್ಳುವುದು; ಹಿಂಜರಿ=ಹಿಮ್ಮೆಟ್ಟು/ಹಿಂದಕ್ಕೆ ಸರಿಯುವುದು; ಬಾಯಲ್ಲಿ+ಆಡಲು; ಜನ ಬಾಯಲ್ಲಾಡಲು ಹಿಂಜರೆಯುವುದು=ಇದೊಂದು ನುಡಿಗಟ್ಟು. ಜಗತ್ತಿನಲ್ಲಿ ಆಗುತ್ತಿರುವ ಕೆಡುಕನ್ನು ಕುರಿತು ಜನರು ಪರಸ್ಪರ ಮಾತನಾಡಲು ಹೆದರಿ ತತ್ತರಿಸುವುದು;

**ಜನರ ಬಾಯಲ್ಲುಳಿಯುವ ವರ್ಷವಿದು... ಜನ ಬಾಯಲ್ಲಾಡಲು ಹಿಂಜರೆವ ವರ್ಷವಿದು**=೧೯೪೦ನೆಯ ಈ ವರುಶ ಜಗತ್ತಿನ ಜನಮನದ ಮೇಲೆ ಎರಡು ಬಗೆಯ ಪರಿಣಾಮಗಳನ್ನುಂಟು ಮಾಡಿದೆ. ಜಗತ್ತಿನಲ್ಲಿ ಮಿಲಿಟೆರಿ ಶಕ್ತಿಯನ್ನು ದೊಡ್ಡ ಪ್ರಮಾಣದಲ್ಲಿ ಪಡೆದಿರುವ ದೇಶಗಳು ಎರಡು ಗುಂಪುಗಳಾಗಿ ವಿಂಗಡಣೆಗೊಂಡು ಮಾಡುತ್ತಿರುವ ಯುದ್ಧದಿಂದ ಜಗತ್ತಿನ ಮಾನವ ಸಮುದಾಯವು ಮಹಾದುರಂತಕ್ಕೆ ಬಲಿಯಾಗುವುದೆಂಬ ವಾಸ್ತವ ಜನರ ಬಾಯಲ್ಲಿ ಉಳಿಯುತ್ತದೆ. ಹಾಗೆಯೇ ಈ ಯುದ್ಧದಲ್ಲಿ ನಡೆಯುವ ಮಾನವ

ಸಮುದಾಯದ ಕಗ್ಗೊಲೆಯನ್ನು ಮತ್ತು ಮಾನವ ನಿರ್ಮಿತವಾದುದೆಲ್ಲವೂ ಅಳಿದು ಬೆಂಗಾಡಾಗುವುದನ್ನು ನೆನಪಿಸಿಕೊಳ್ಳಲು ಹಿಂಜರಿಯುತ್ತದೆ.

ಮುಪ್ಪಾದವರು=ವಯಸ್ಸಾದವರು; ಹರೆಯದವರು=ತರುಣತರುಣಿಯರು;

**ಮುಪ್ಪಾದವರ ಎದುರೇ ಹರೆಯದವರ ಸಾವು**=ಯುದ್ಧದಿಂದಾಗಿ ರಣರಂಗದಲ್ಲಿ ಹೋರಾಡುತ್ತಿರುವ ತರುಣರು ಸಾವನ್ನಪ್ಪುತ್ತಾರೆ. ವಯಸ್ಸಾದವರು ಇಂತಹ ಎದೆಬಿರಿಯುವ ಸಾವು ನೋವನ್ನು ಕಣ್ಣಾರ ನೋಡುವ ಸಂಕಟಕ್ಕೆ ಗುರಿಯಾಗುತ್ತಾರೆ;

ವಿವೇಕಿ=ಅರಿವುಳ್ಳ ವ್ಯಕ್ತಿ/ತಿಳುವಳಿಕೆಯುಳ್ಳ ವ್ಯಕ್ತಿ; ಅಳಿವು=ನಾಶ/ಸಾವು; ಮೂರ್ಖ=ತಿಳಿಗೇಡಿ/ಅರಿವಿಲ್ಲದವನು; ಉಳಿವು=ಜೀವಂತವಾಗಿರುವುದು;

**ವಿವೇಕಿಗಳ ಅಳಿವುಮೂರ್ಖರ ಉಳಿವು**=ಯುದ್ಧದಿಂದಾಗಿ ಕಟ್ಟುಮಸ್ತಾದ ದೇಹಶಕ್ತಿ ಮತ್ತು ಮನೋಶಕ್ತಿಯನ್ನುಳ್ಳ ಲಕ್ಷಾಂತರ ಮಂದಿ ಸಾಯುತ್ತಾರೆ.

ಯುದ್ಧ ನಡೆಯುವುದನ್ನೇ ವಿರೋಧಿಸುತ್ತಾ, ಮಾನವ ಸಮುದಾಯವು ದೇಶಗಳ ಗಡಿಗಳಿಲ್ಲದೆ, ಜನಾಂಗ/ಧರ್ಮ/ಮಯ್ ಬಣ್ಣದ ತಾರತಮ್ಯವಿಲ್ಲದೆ, ಇಡೀ ಜಗತ್ತಿನ ಮಾನವ ಸಮುದಾಯವೆಲ್ಲವೂ ಪರಸ್ಪರ ಪ್ರೀತಿ, ಕರುಣೆ, ಗೆಳೆತನ ಮತ್ತು ಸಮಾನತೆಯಿಂದ ಬಾಳುವಂತಾಗಬೇಕೆಂಬ ಕರೆಯನ್ನು ನೀಡುವ ವಿವೇಕಿಗಳನ್ನು ಎರಡು ಕಡೆಯ ಸೇನೆಗಳು ಸದೆಬಡಿದು ಕೊಲ್ಲುತ್ತವೆ;

ಆದರೆ ತಮ್ಮ ಅಧಿಕಾರದ ಗದ್ದುಗೆಯನ್ನು ಉಳಿಸಿಕೊಳ್ಳುವುದಕ್ಕಾಗಿ ಜನಾಂಗ, ಧರ್ಮ, ದೇಶ ಮತ್ತು ಸಂಸ್ಕೃತಿಯ ಹೆಸರಿನಲ್ಲಿ ಮಾನವ ಸಮುದಾಯದಲ್ಲಿ ಪರಸ್ಪರ ಹಗೆತನವನ್ನು ಬೆಳೆಸಿ ಯುದ್ಧಕ್ಕೆ ಕಾರಣರಾದ ತಿಳಿಗೇಡಿಗಳಾದ ರಾಜಕಾರಣಿಗಳು ಜೀವಂತವಾಗಿ ಉಳಿದುಕೊಳ್ಳುತ್ತಾರೆ.

ಏಕೆಂದರೆ ಅಧಿಕಾರದ ಗದ್ದುಗೆಯಲ್ಲಿ ಕುಳಿತಿರುವ ಇವರಾಗಲಿ ಇಲ್ಲವೇ ಇವರ ಮಕ್ಕಳಾಗಲಿ ರಣರಂಗದಲ್ಲಿ ನೇರಾನೇರವಾಗಿ ಶತ್ರುಗಳ ಎದುರು ಹೋರಾಡಲು ಹೋಗುವುದಿಲ್ಲ;

ನುಂಗುವ=ಕಬಳಿಸುವ/ಎಲ್ಲವನ್ನೂ ತನ್ನೊಳಕ್ಕೆ ಸೇರಿಸಿಕೊಳ್ಳುವ; ದಾಹ=ಬಾಯಾರಿಕೆ/ಉರಿ/ತಾಪ/ಬೇಗೆ;

**ಭೂಮಿಯಿನ್ನು ಏನನ್ನೂ ಬೆಳೆಯದು... ಅದಕ್ಕೀಗ ನುಂಗುವ ದಾಹ**=ಇನ್ನು ಮುಂದೆ ಭೂಮಿಯ ಪಚ್ಚೆಪಯಿರುಗಳಿಂದ ಕೂಡಿ ಹೂಹಣ್ಣುಗಳನ್ನು ನೀಡುವುದಿಲ್ಲ. ಏಕೆಂದರೆ ಭೂಮಿಯನ್ನು ಉತ್ತು ಬಿತ್ತಿ ಬೆಳೆಯಲು ಬಳಸುವ

ಬದಲು, ಭೂಮಂಡಲವನ್ನು ರಣರಂಗವನ್ನಾಗಿ ಮಾಡಿಕೊಳ್ಳಲಾಗಿದೆ. ಈಗೇನಿದ್ದರೂ ಪರಸ್ಪರ ಕಾದಾಡಿ ಒಬ್ಬರು ಮತ್ತೊಬ್ಬರನ್ನು ಕೊಲ್ಲುವಾಗ ಭೂಮಿಯ ಮೇಲೆ ಬೀಳುವ ಹೆಣಗಳನ್ನು ತನ್ನಲ್ಲಿ ಒಳಗೊಳ್ಳುವುದು ಮಾತ್ರ ಭೂಮಿಯ ಪಾಲಿಗೆ ಉಳಿದಿದೆ;

ಆಕಾಶದಿಂದ+ಇನ್ನು; ಸುರಿ=ಬೀಳು; ಲೋಹ=ಉಕ್ಕು ಕಬ್ಬಿಣ ಮುಂತಾದ ಲೋಹಗಳಿಂದ ತಯಾರು ಮಾಡಿರುವ ಮದ್ದುಗುಂಡುಗಳನ್ನು ಒಳಗೊಂಡ ಹತಾರಗಳು;

**ಆಕಾಶದಿಂದಿನ್ನು ಮಳೆ ಸುರಿಯದು... ಸುರಿವುದು ಬರಿ ಲೋಹ**=ಇನ್ನು ಮುಂದೆ ಆಕಾಶದಿಂದ ಭೂಮಂಡಲದ ಸಕಲ ಜೀವಿಗಳ ಪಾಲಿಗೆ ಜೀವಶಕ್ತಿಯಾದ ಮಳೆಯು ಸುರಿಯುವುದಿಲ್ಲ. ಅದರ ಬದಲು ಇಡೀ ಭೂಮಂಡಲದಲ್ಲಿರುವ ಜೀವರಾಶಿಯನ್ನು ಬಲಿ ತೆಗೆದುಕೊಳ್ಳುವ ಮದ್ದುಗುಂಡುಗಳ ಮತ್ತು ಬಾಂಬುಗಳ ಸುರಿಮಳೆಯಾಗುತ್ತದೆ;

ಬ್ರೆಕ್ಟ್ ಅವರು ತಮ್ಮ ವ್ಯಕ್ತಿಗತ ಜೀವನದಲ್ಲಿ ನಡೆದ ಹಲವು ಪ್ರಸಂಗಗಳ ಮೂಲಕ ೧೯೪೦ನೆಯ ವರುಶದಲ್ಲಿ ಹೇಗೆ ಇಡೀ ಜಗತ್ತು ಎರಡನೆಯ ಮಹಾಯುದ್ಧದಿಂದಾಗಿ ದುರಂತದ ಕಡೆಗೆ ಸಾಗುತ್ತಿದೆ ಎಂಬುದನ್ನು ಈ ಕವನದಲ್ಲಿ ನಿರೂಪಿಸಿದ್ದಾರೆ.



# ೧೮. ಕ್ರಿಟಿಕಲ್ ಧೋರಣೆಯ ಬಗ್ಗೆ

**ಅನುವಾದ: ಯು.ಆರ್.ಅನಂತಮೂರ್ತಿ**

ಕ್ರಿಟಿಕಲ್ ಧೋರಣೆ ಬಹುತೇಕರಿಗೆ
ನಿಷ್ಫಲವೆನ್ನಿಸಬಹುದು
ಕಾರಣ
ರಾಜ್ಯ ವ್ಯವಸ್ಥೆ ತಮ್ಮ ವಿಮರ್ಶೆಗೆ
ಕಿಮ್ಮತ್ತಿನ ಬೆಲೆ ಕೊಡದೆ ನಿರ್ಲಕ್ಷಿಸುತ್ತಾರೆ ಅಂತ.

ಕಾಣೋದಕ್ಕೆ ನಿಷ್ಫಲ ಎನ್ನಿಸೋದು
ನಮ್ಮ ದೌರ್ಬಲ್ಯದ ಫಲವೇ ಇರಬಹುದಲ್ಲವೆ
ವಿಮರ್ಶೆಗೆ ತೋಳ್ಬಲ ಸಿಗಲಿ
ಆಗ ನೋಡಿ
ಹೇಗೆ ವ್ಯವಸ್ಥೆಗಳು ಉರುಳುತ್ತವೆ.

ಒಂದು ನದಿಯ ದಿಕ್ಕು ಬದಲಿಸೋದು
ಒಂದು ಹಣ್ಣಿನ ಗಿಡವನ್ನು ಕಸಿ ಮಾಡೋದು
ಮನುಷ್ಯನ್ನ ವಿದ್ಯಾವಂತ ಮಾಡೋದು
ರಾಜ್ಯ ವ್ಯವಸ್ಥೆಯನ್ನ ಬದಲಿಸೋದು
ಇವೆಲ್ಲ ಅರ್ಥಪೂರ್ಣ
ಕ್ರಿಟಿಕಲ್ ಧೋರಣೆಯ ಉದಾಹರಣೆಗಳಷ್ಟೇ ಅಲ್ಲ
ಕಲಾತ್ಮಕ ಕ್ರಿಯೆ ಕೂಡ.

**ದುಡಿಯುವ ಶ್ರಮಜೀವಿಗಳ ಹಸಿವು, ಬಡತನ, ಅಪಮಾನ ಮತ್ತು ಸಾವು ನೋವಿಗೆ ಕಾರಣವಾಗಿರುವ ರಾಜಕೀಯ, ಸಾಮಾಜಿಕ, ಧಾರ್ಮಿಕ ಮತ್ತು ಸಂಪತ್ತಿನ ಒಡೆತನದ ವ್ಯವಸ್ಥೆಗಳಲ್ಲಿರುವ ಕೆಡುಕುಗಳನ್ನು ಗುರುತಿಸಿ, ಅವನ್ನು ತೊಡೆದುಹಾಕುವ ನಿಲುವನ್ನು ತಳೆದು, ಅದಕ್ಕೆ ಅನುಗುಣವಾಗಿ ಕ್ರಿಯಾಶೀಲರಾಗಿ ಬಾಳಬೇಕೆಂಬ ಸಂಗತಿಯನ್ನು ಈ ಕವನದಲ್ಲಿ ಹೇಳಲಾಗಿದೆ.**

ಕ್ರಿಟಿಕಲ್ / CRITICAL=ಇದು ಒಂದು ಇಂಗ್ಲಿಶ್ ಪದ. ಯಾವುದೇ ಒಂದು ವಸ್ತುವಿನಲ್ಲಿರುವ / ಸಂಗತಿಯಲ್ಲಿರುವ / ವ್ಯಕ್ತಿಯಲ್ಲಿರುವ / ವ್ಯವಸ್ಥೆಯಲ್ಲಿರುವ ಸರಿ–ತಪ್ಪುಗಳನ್ನು ಮತ್ತು ಒಳಿತು–ಕೆಡುಕನ್ನು ಗುರುತಿಸಿ, ತಪ್ಪುಗಳನ್ನು ಮತ್ತು ಕೆಡುಕನ್ನು ತೊಡೆದುಹಾಕಿ, ಸರಿಯಾದ ಮತ್ತು ಒಳಿತಿನ ವಿಚಾರಗಳನ್ನು ಎತ್ತಿಹಿಡಿಯುವುದು.

ಧೋರಣೆ=ನಿಲುವು/ಆಲೋಚನೆಯ ರೀತಿ; ಬಹುತೇಕರು=ಹೆಚ್ಚಿನ ಮಂದಿ; ನಿಷ್ಫಲ+ಎನ್ನಿಸಬಹುದು; ನಿಷ್ಫಲ=ಪ್ರಯೋಜನವಿಲ್ಲದ್ದು/ಉಪಯುಕ್ತವಲ್ಲದ್ದು;

**ಕ್ರಿಟಿಕಲ್ ಧೋರಣೆ**=ಜನಸಮುದಾಯದ ನಡೆನುಡಿಯನ್ನು ರೂಪಿಸುತ್ತಿರುವ ಮತ್ತು ನಿಯಂತ್ರಿಸುತ್ತಿರುವ ವ್ಯವಸ್ಥೆಗಳಲ್ಲಿನ ಕಟ್ಟುಕಟ್ಟಳೆಗಳನ್ನು ಮತ್ತು ಸಂಪ್ರದಾಯಗಳನ್ನು ಒರೆಹಚ್ಚಿ ನೋಡಿ, ಅವುಗಳಲ್ಲಿ ಜನರ ಬದುಕಿಗೆ ಕೇಡನ್ನು ಬಗೆಯುವ ಸಂಗತಿಗಳನ್ನು ತೊಡೆದುಹಾಕಬೇಕೆಂಬ ನಿಲುವನ್ನು ತಳೆಯುವುದು. ಉದಾಹರಣೆ: ಜನಾಂಗದ ಮೇಲರಿಮೆ; ಮೇಲು–ಕೀಳಿನ ಜಾತಿ ವ್ಯವಸ್ಥೆ; ಲಿಂಗ ತಾರತಮ್ಯ; ಸಂಪತ್ತಿನ ವಿತರಣೆಯಲ್ಲಿನ ಅಸಮಾನತೆ;

**ಕ್ರಿಟಿಕಲ್ ಧೋರಣೆ ಬಹುತೇಕರಿಗೆ ನಿಷ್ಫಲವೆನ್ನಿಸಬಹುದು**=ಕ್ರಿಟಿಕಲ್ ಧೋರಣೆಯನ್ನು ಕುರಿತು ಸಮಾಜದಲ್ಲಿ ಬಹಳಷ್ಟು ಮಂದಿ ಇದರಿಂದ ಸಮಾಜದಲ್ಲಿ ಏನೊಂದು ಬದಲಾವಣೆಯಾಗುವುದಿಲ್ಲ. ಇದು ಯಾರ ಮೇಲೂ ಯಾವುದೇ ಪರಿಣಾಮವನ್ನು ಬೀರುವುದಿಲ್ಲ ಎಂದು ನಿರಾಶೆಯಿಂದ ನುಡಿಯುತ್ತಾರೆ;

ಕಾರಣ=ಏಕೆಂದರೆ; ರಾಜ್ಯ=ರಾಜನೊಬ್ಬನ ಇಲ್ಲವೇ ಸರ್ಕಾರದ ಆಡಳಿತಕ್ಕೆ ಒಳಪಟ್ಟ ನಾಡು; ವ್ಯವಸ್ಥೆ=ಏರ್ಪಾಡು/ಕಟ್ಟಳೆ/ನಿಯಮ;

ರಾಜ್ಯ ವ್ಯವಸ್ಥೆ=ಜಗತ್ತಿನಲ್ಲಿರುವ ಪ್ರತಿಯೊಂದು ದೇಶದಲ್ಲಿಯೂ ರಾಜಕೀಯ/ ಸಾಮಾಜಿಕ/ಧಾರ್ಮಿಕ ವ್ಯವಸ್ಥೆಯಲ್ಲಿ ಹಾಗೂ ಸಂಪತ್ತಿನ ವಿತರಣೆಯಲ್ಲಿ ಅನೇಕ ಬಗೆಯ ಕಟ್ಟುಕಟ್ಟಲೆಗಳಿರುತ್ತವೆ; ರಾಜಕೀಯವಾಗಿ ಪ್ರಜಾಪ್ರಭುತ್ವ / ಮಿಲಿಟರಿ

ಆಡಳಿತ / ಸಮತಾವಾದ (ಕಮ್ಯುನಿಸಮ್) / ಸಮಾಜವಾದ (ಸೋಶಿಯಲಿಸಮ್) / ನಿರಂಕುಶ ಆಡಳಿತ ಇರುತ್ತದೆ; ಸಾಮಾಜಿಕವಾಗಿ ಮತ್ತು ಧಾರ್ಮಿಕವಾಗಿ ಬಹು ಬಗೆಯ ಬುಡಕಟ್ಟುಗಳು, ಜನಾಂಗಗಳು, ಧರ್ಮಗಳು ಮತ್ತು ಜಾತಿಗಳು ಇರುತ್ತವೆ; ಸಂಪತ್ತಿನ ಒಡೆತನದಲ್ಲಿ ಬಡವರು / ಮಧ್ಯಮ ವರ್ಗದವರು / ಸಿರಿವಂತರು ಇರುತ್ತಾರೆ. ಈ ಸಂಗತಿಗಳೆಲ್ಲವೂ ಒಂದಕ್ಕೊಂದು ಹೆಣೆದುಕೊಂಡು ಮಾನವ ಸಮಾಜ ರೂಪುಗೊಂಡಿದೆ.

ಇಂತಹ ವ್ಯವಸ್ಥೆಯಲ್ಲಿ ರಾಜಕೀಯ ಅಧಿಕಾರವಿರುವ, ಜನಾಂಗ ಜಾತಿ ಧರ್ಮದ ಬಲವುಳ್ಳ ಮತ್ತು ದೊಡ್ಡ ಪ್ರಮಾಣದ ಆಸ್ತಿ ಒಡವೆ ವಸ್ತುಗಳನ್ನು ಹೊಂದಿರುವ ವ್ಯಕ್ತಿಗಳ ವಂಚನೆ, ಸುಲಿಗೆ ಮತ್ತು ದಬ್ಬಾಳಿಕೆಯಿಂದ ಕೋಟಿಗಟ್ಟಲೆ ಶ್ರಮಜೀವಿಗಳು ಹಸಿವು, ಬಡತನ ಮತ್ತು ಅಪಮಾನದಲ್ಲಿ ಸಿಲುಕಿ ನರಳುತ್ತ, ಜೀವನಕ್ಕೆ ಅತ್ಯಗತ್ಯವಾದ ಅನ್ನ, ಬಟ್ಟೆ, ವಸತಿ, ವಿದ್ಯೆ, ಉದ್ಯೋಗ ಮತ್ತು ಆರೋಗ್ಯದಿಂದ ವಂಚಿತರಾಗಿರುತ್ತಾರೆ;

ವಿಮರ್ಶೆ=ಸರಿ/ ತಪ್ಪುಗಳನ್ನು ಒರೆಹಚ್ಚಿ ನೋಡುವುದು; ಕಿಮ್ಮತ್ತು= ಜೀವನದಲ್ಲಿ ಒಳ್ಳೆಯದೆಂದು ತಿಳಿಯುವುದು; ಕಿಮ್ಮತ್ತಿನ ಬೆಲೆ=ಇದೊಂದು ನುಡಿಗಟ್ಟು. ಜನರ ಒಳ್ಳೆಯ ನಡೆನುಡಿಗಳನ್ನು ಕಂಡಾಗ ಆನಂದಗೊಂಡು ಮೆಚ್ಚುಗೆಯನ್ನು ಸೂಚಿಸುವುದು; ಕೊಡದೆ=ನೀಡದೆ; ನಿರ್ಲಕ್ಷಿಸು= ಕಡೆಗಣಿಸುವುದು;

ಕಿಮ್ಮತ್ತಿನ ಬೆಲೆ ಕೊಡದೆ ನಿರ್ಲಕ್ಷಿಸು=ಸಂಪೂರ್ಣವಾಗಿ ಕಡೆಗಣಿಸು/ತಿರಸ್ಕರಿಸು;

**ರಾಜ್ಯ ವ್ಯವಸ್ಥೆ ತಮ್ಮ ವಿಮರ್ಶೆಗೆ ಕಿಮ್ಮತ್ತಿನ ಬೆಲೆ ಕೊಡದೆ ನಿರ್ಲಕ್ಷಿಸುತ್ತಾರೆ ಅಂತ**=ತಮ್ಮ ಕಣ್ಣ ಮುಂದಿನ ರಾಜ್ಯ ವ್ಯವಸ್ಥೆಯಲ್ಲಿ ಅನೇಕ ತಪ್ಪುಗಳು ಕಂಡು ಬಂದರೂ, ಬಹುತೇಕ ಮಂದಿ ವ್ಯವಸ್ಥೆಯಲ್ಲಿನ ಕೆಡುಕುಗಳ ಬಗ್ಗೆ ದನಿ ಎತ್ತುವುದಿಲ್ಲ. ಇದಕ್ಕೆ ಕಾರಣವೇನೆಂದರೆ ವ್ಯವಸ್ಥೆಯಲ್ಲಿನ ಕೆಡುಕುಗಳನ್ನು ಗುರುತಿಸಿ ಆಡುವ ಮಾತುಗಳನ್ನು ಆಡಳಿತದ ಗದ್ದುಗೆಯಲ್ಲಿರುವವರು, ಜಾತಿ ಮತದ ಗುರುಗಳು ಮತ್ತು ಸಿರಿವಂತರು ಕಿವಿಯ ಮೇಲೆ ಹಾಕಿಕೊಳ್ಳುವುದಿಲ್ಲ ಮತ್ತು ಆ ರೀತಿ ಮಾತನಾಡುವವರನ್ನು ಕೀಳಾಗಿ ಕಾಣುತ್ತಾರೆ;

ಕಾಣೋದಕ್ಕೆ=ಕಾಣುವುದಕ್ಕೆ/ಮೇಲು ನೋಟಕ್ಕೆ; ನಿಷ್ಫಲ=ಪರಿಣಾಮಕಾರಿ ಯಲ್ಲದುದು/ಪ್ರಯೋಜನವಿಲ್ಲದುದು; ಎನ್ನಿಸೋದು=ಎನ್ನಿಸುವುದು; ದೌರ್ಬಲ್ಯ=ಬಲಹೀನತೆ/ಶಕ್ತಿಯಿಲ್ಲದಿರುವುದು; ಫಲ=ಪರಿಣಾಮ/ಪ್ರಯೋಜನ;

**ಕಾಣ್ಕೋದಕ್ಕೆ ನಿಷ್ಫಲ ಎನ್ನಿಸೋದು ನಮ್ಮ ದೌರ್ಬಲ್ಯದ ಫಲವೇ ಇರಬಹುದಲ್ಲವೆ**=ದೇಶಕ್ಕೆ ಒಳಿತನ್ನು ಉಂಟುಮಾಡುವಂತಹ ರೀತಿಯಲ್ಲಿ ಹೇಳಿದ ಮಾತುಗಳಿಗೆ ಯಾವುದೇ ಬೆಲೆಯಿಲ್ಲ ಮತ್ತು ಜನಸಮುದಾಯದ ಒಳಿತನ್ನು ಚಿಂತಿಸುವ ವ್ಯಕ್ತಿಗಳಿಗೆ ಮನ್ನಣೆಯಿಲ್ಲ ಎಂದು ನಿರಾಶೆಯಿಂದ ನುಡಿಯುವುದು ನಮ್ಮ ಶಕ್ತಿಗುಂದಿದ ಹೇಡಿತನವನ್ನು ಸಂಕೇತಿಸುತ್ತದೆ. ಆದ್ದರಿಂದಲೇ ನಮ್ಮ ರಾಜ್ಯ ವ್ಯವಸ್ಥೆಯಲ್ಲಿರುವ ಕೆಡುಕುಗಳು ನಮಗೆ ಗೊತ್ತಿದ್ದರೂ, ಅವನ್ನು ಹೇಳಿದರೆ ದೇಶದ್ರೋಹಿ / ಧರ್ಮದ್ರೋಹಿ / ಭಯೋತ್ಪಾದಕ ಎಂಬ ಆಪಾದನೆಗೆ ಗುರಿಯಾಗಿ, ಸೆರೆವಾಸ ಇಲ್ಲವೇ ಸಾವು ನೋವಿಗೆ ಬಲಿಯಾಗಬೇಕಾಗುವುದೋ ಎಂಬ ಅಂಜಿಕೆಯಿಂದ ಗಟ್ಟಿಯಾದ ದನಿಯಲ್ಲಿ ಹೇಳಲು ಶಕ್ತಿಯಿಲ್ಲದೆ ಅವುಗಳ ಬಗ್ಗೆ ತುಟಿಬಿಚ್ಚದೆ ಮೂಕರಾಗಿದ್ದೇವೆ;

**ತೋಳ್ಬಲ ಸಿಗುವುದು**=ಈ ನುಡಿಗಟ್ಟು ಒಂದು ರೂಪಕವಾಗಿ ಬಳಕೆಯಾಗಿದೆ. ದೇಶದ ಜನರು ಸಾಮಾಜಿಕ ಅರಿವು ಮತ್ತು ಎಚ್ಚರವನ್ನು ಪಡೆದು ರಾಜ್ಯ ವ್ಯವಸ್ಥೆಯಲ್ಲಿನ ಕೆಡುಕನ್ನು ಎದುರಿಸಲು ಸಿದ್ಧರಾಗಿ ಒಗ್ಗಟ್ಟಿನಿಂದ ಕ್ರಿಯಾಶೀಲರಾಗಿ ಮುನ್ನಡೆದಾಗ ಅಪಾರವಾದ ಶಕ್ತಿಯು ದೊರಕುತ್ತದೆ; ಉರುಳು=ಕೆಳಕ್ಕೆ ಬೀಳುವುದು/ನಾಶವಾಗು;

**ವಿಮರ್ಶೆಗೆ ತೋಳ್ಬಲ ಸಿಗಲಿ... ಆಗ ನೋಡಿ...ಹೇಗೆ ವ್ಯವಸ್ಥೆಗಳು ಉರುಳುತ್ತವೆ**= ರಾಜ್ಯ ವ್ಯವಸ್ಥೆಯ ಕಾರಣದಿಂದಾಗಿ ವಂಚನೆ, ಸುಲಿಗೆ ಮತ್ತು ಕ್ರೂರತನದ ಹಿಂಸಾಚಾರಕ್ಕೆ ಒಳಗಾಗಿ ನರಳುತ್ತಿರುವ ಜನರೆಲ್ಲರೂ ಚಿಂತನಶೀಲರ ಮಾತು ಗಳನ್ನು ಕೇಳಿ, ಎಚ್ಚೆತ್ತು ಅವನ್ನು ತೊಡೆದುಹಾಕಲು ಒಗ್ಗಟ್ಟಿನಿಂದ ಕ್ರಿಯಾಶೀಲ ರಾದರೆ, ವ್ಯವಸ್ಥೆಯಲ್ಲಿನ ಕೆಡುಕುಗಳು ನಾಶಗೊಳ್ಳುತ್ತವೆ/ಇಲ್ಲವಾಗುತ್ತವೆ;

**ಒಂದು ನದಿಯ ದಿಕ್ಕು ಬದಲಿಸೋದು**=ಹರಿಯುತ್ತಿರುವ ನದಿಗೆ ಅಣೆಕಟ್ಟನ್ನು ಕಟ್ಟಿ, ನೀರನ್ನು ಜನಹಿತಕ್ಕಾಗಿ ಮತ್ತು ಬೇಸಾಯಕ್ಕಾಗಿ ಬಳಸುವ ಕೆಲಸ;

ಕಸಿ ಮಾಡು/ಕಸಿ ಕಟ್ಟು=ಗಿಡ ಮರ ಬಳ್ಳಿಗಳ ರೆಂಬೆಯನ್ನು ಕತ್ತರಿಸಿ, ಮತ್ತೊಂದು ರೆಂಬೆಗೆ ಅಂಟಿಸಿ, ಬೆಳೆಯುವಂತೆ ಮಾಡುವ ಕ್ರಿಯೆ; ಮಾಡೋದು= ಮಾಡುವುದು;

**ಒಂದು ಹಣ್ಣಿನ ಗಿಡವನ್ನು ಕಸಿ ಮಾಡೋದು**=ಒಂದೇ ಗುಂಪಿಗೆ ಸೇರಿದ ಎರಡು ಹಣ್ಣಿನ ಗಿಡಗಳ ರೆಂಬೆಗಳನ್ನು ಕತ್ತರಿಸಿ, ಮತ್ತೆ ಅವನ್ನು ಜತೆಗೂಡಿಸಿ ಕಟ್ಟಿ ಬೆಳೆಯುವಂತೆ ಮಾಡಿದಾಗ, ಕಸಿಕಟ್ಟಿದ ಗಿಡವು ಈ ಎರಡು ಹಣ್ಣಿನ ಗಿಡಗಳ

ಒಳ್ಳೆಯ ಅಂಶವನ್ನು ಪಡೆದುಕೊಂಡು ಬೆಳೆದು, ಮೊದಲಿನ ಎರಡು ಗಿಡಗಳಿಗಿಂತಲೂ ರುಚಿಕರವಾದ ಮತ್ತು ಗುಣಮಟ್ಟದ ಹಣ್ಣುಗಳನ್ನು ಬಿಡುತ್ತದೆ;

ಮನುಷ್ಯನ್ನ=ವ್ಯಕ್ತಿಯನ್ನು; ವಿದ್ಯಾವಂತ=ವಿದ್ಯೆಯನ್ನು ಕಲಿತವನು;

**ಮನುಷ್ಯನ್ನ ವಿದ್ಯಾವಂತ ಮಾಡೋದು**=ವ್ಯಕ್ತಿಯನ್ನು ಅಕ್ಕರದ ಕಲಿಕೆಯ ಮೂಲಕ ಸಾಮಾಜಿಕ ಅರಿವು ಮತ್ತು ಎಚ್ಚರವನ್ನು ಪಡೆದವನನ್ನಾಗಿ ರೂಪಿಸುವುದು;

**ರಾಜ್ಯ ವ್ಯವಸ್ಥೆಯನ್ನು ಬದಲಿಸೋದು**=ರಾಜ್ಯದಲ್ಲಿರುವ ರಾಜಕೀಯ/ ಸಾಮಾಜಿಕ / ಧಾರ್ಮಿಕ / ಸಂಪತ್ತಿನ ವಿತರಣೆಯಲ್ಲಿನ ತಪ್ಪುಗಳನ್ನು ತೊಡೆದು ಹಾಕಿ, ಪ್ರಜೆಗಳೆಲ್ಲರಿಗೂ ಅನ್ನ–ಬಟ್ಟೆ–ವಸತಿ–ವಿದ್ಯೆ–ಉದ್ಯೋಗ–ಆರೋಗ್ಯ ದೊರಕುವಂತಹ ಸರ್ವಸಮಾನತೆಯ, ಸ್ವಾತಂತ್ರ್ಯದ ಮತ್ತು ಪ್ರೀತಿ ಕರುಣೆ ಗೆಳೆತನದಿಂದ ಕೂಡಿದ ಬದುಕಿನ ಅವಕಾಶಗಳನ್ನು ಕಲ್ಪಿಸುವುದು;

**ಇವೆಲ್ಲ ಅರ್ಥಪೂರ್ಣ**=ನದಿಯ ದಿಕ್ಕನ್ನು ಬದಲಿಸುವ, ಹಣ್ಣಿನ ಗಿಡವನ್ನು ಕಸಿಮಾಡುವ, ವ್ಯಕ್ತಿಯನ್ನು ವಿದ್ಯಾವಂತನನ್ನಾಗಿ ರೂಪಿಸುವ ಮತ್ತು ರಾಜ್ಯದ ವ್ಯವಸ್ಥೆಯಲ್ಲಿನ ಕೆಡುಕನ್ನು ನಾಶಪಡಿಸುವ ಕೆಲಸಗಳೆಲ್ಲವೂ ಅಪಾರವಾದ ಕುಶಲತೆ, ಪರಿಶ್ರಮ ಮತ್ತು ಸದುದ್ದೇಶದಿಂದ ಮಾನವ ಸಮುದಾಯದ ಹಿತಕ್ಕಾಗಿ ಮಾಡುವ ಕೆಲಸಗಳಾಗಿರುತ್ತವೆ;

ಕಲೆ=ವ್ಯಕ್ತಿಯ ಮನದಲ್ಲಿ ಮೂಡುವ ಕಲ್ಪನೆ ಮತ್ತು ಚಿಂತನೆಯಿಂದ ಜತೆಗೂಡಿ, ನೋಡುವವರ ಮತ್ತು ಕೇಳುವವರ ಕಣ್ಮನಗಳನ್ನು ಸೆಳೆಯುವ ರೀತಿಯಲ್ಲಿ ಕುಶಲತೆಯಿಂದ ಹೊರಹೊಮ್ಮಿರುವ ಕಾವ್ಯ / ನಾಟಕ / ಚಿತ್ರ / ಶಿಲ್ಪ / ನಾಟ್ಯ /ಸಂಗೀತವನ್ನು ಕಲೆಯೆಂದು ಕರೆಯುತ್ತಾರೆ; ಕಲಾತ್ಮಕ=ಕಲೆಯಿಂದ ಕೂಡಿದ; ಕ್ರಿಯೆ=ಕೆಲಸ; ಕೂಡ=ಜತೆಯಲ್ಲಿರುವುದು/ಕೂಡಿಕೊಂಡಿರುವುದು/ ಆಗಿರುವುದು;

**ಇವೆಲ್ಲ ಅರ್ಥಪೂರ್ಣ ಕ್ರಿಟಿಕಲ್ ಧೋರಣೆಯ ಉದಾಹರಣೆಗಳಷ್ಟೇ ಅಲ್ಲ ಕಲಾತ್ಮಕ ಕ್ರಿಯೆ ಕೂಡ**=ಕಾವ್ಯವನ್ನು ಒಳಗೊಂಡಂತೆ ಎಲ್ಲ ಕಲೆಗಳು ವ್ಯಕ್ತಿಯ ಪ್ರತಿಭೆ, ಪರಿಶ್ರಮ ಮತ್ತು ನಿರಂತರ ತರಬೇತಿಯಿಂದ ಹೇಗೆ ಹೊರ ಹೊಮ್ಮುತ್ತವೆಯೋ ಅಂತೆಯೇ ಕ್ರಿಟಿಕಲ್ ಧೋರಣೆಯಿಂದ ಹೊರಹೊಮ್ಮುವ ವಿಚಾರಗಳು ಕೂಡ ಜನರ ನಿರಂತರ ಕ್ರಿಯಾಶೀಲತೆಯಿಂದ ಮಾತ್ರ ಕಾರ್ಯರೂಪಕ್ಕೆ ಬರುತ್ತವೆ.

ಈ ಕವನದ ಆಶಯವನ್ನು ಬ್ರೆಕ್ಟ್ ಕವಿಯ ಜೀವನದ ಹಿನ್ನೆಲೆಯಿಂದ ಪರಿಶೀಲಿಸಿದಾಗ ಇನ್ನು ಹಲವಾರು ಸಂಗತಿಗಳು ನಮಗೆ ತಿಳಿದುಬರುತ್ತವೆ.

೧. ಕ್ರಿಟಿಕಲ್ ಧೋರಣೆಯ ಬಗ್ಗೆ ಎಂಬ ಈ ಕವನವನ್ನು ಬ್ರೆಕ್ಟ್ ಅವರು ೧೯೩೫ ರಲ್ಲಿ ರಚಿಸಿದ್ದಾರೆ. ಈ ಕವನವನ್ನು ರಚಿಸಿದ ಕಾಲದಲ್ಲಿ ಬ್ರೆಕ್ಟ್ ಅವರು ದೇಶಾಂತರವಾಸಿಯಾಗಿ ಡೆನ್ಮಾರ್ಕ್ ದೇಶದಲ್ಲಿ ನೆಲೆಸಿದ್ದರು.ಜರ್ಮನಿಯಲ್ಲಿ ಸರ್ವಾಧಿಕಾರಿಯಾಗಿದ್ದ ಹಿಟ್ಲರನ ದಬ್ಬಾಳಿಕೆ ಮತ್ತು ಕ್ರೂರತನ ಹಲ್ಲೆಯಿಂದ ಪಾರಾಗಿ, ಬ್ರೆಕ್ಟ್ ಅವರು ತಾಯ್ನಾಡನ್ನು ತೊರೆದು ಬಂದಿದ್ದರೂ, ತಾಯ್ನಾಡಿನಲ್ಲಿ ನಾಜಿ ಸೇನೆಯ ಆಕ್ರಮಣಕ್ಕೆ ಗುರಿಯಾಗಿ ಲಕ್ಷಾಂತರ ಮಂದಿ ಯಹೂದಿಗಳು ಗ್ಯಾಸ್ ಚೇಂಬರಿನಲ್ಲಿ ನಂಜಿನ ಗಾಳಿಯಿಂದ ಉಸಿರು ಕಟ್ಟಿ ಸಾಯುತ್ತಿರುವ, ಮದ್ದುಗುಂಡಿನ ದಾಳಿಗೆ ಸಿಲುಕಿ ಚಿದ್ರಚಿದ್ರಗೊಂಡು ಸಾವು ನೋವಿಗೆ ಗುರಿಯಾಗುತ್ತಿರುವ, ಯಹೂದಿ ಜನಸಮುದಾಯವು ತಮ್ಮ ಕಣ್ಣಮುಂದೆಯೇ ತಾಯಿ ತಂದೆ ಮಕ್ಕಳು ಗಂಡ ಹೆಂಡತಿ ಅಣ್ಣತಮ್ಮಂದಿರನ್ನು ಮತ್ತು ಆತ್ಮೀಯರೆಲ್ಲರನ್ನೂ ಕಳೆದುಕೊಳ್ಳುತ್ತಿರುವ ಸಂಗತಿಗಳೆಲ್ಲವೂ ಬ್ರೆಕ್ಟ್ ಅವರ ಮಯ್ ಮನಸ್ಸನ್ನು ತೀವ್ರವಾಗಿ ಕಾಡುತ್ತಿದ್ದವು.

ಕವಿ, ಕತೆಗಾರ, ನಾಟಕಕಾರ ಮತ್ತು ನಾಟಕದ ನಿರ್ದೇಶಕರಾಗಿದ್ದ ಬ್ರೆಕ್ಟ್ ಅವರ ಪಾಲಿಗೆ ಸಾಹಿತ್ಯವನ್ನು ಒಳಗೊಂಡಂತೆ ಕಲೆಯೆಂಬುದು ಕೇವಲ ಮನರಂಜನೆಯ ಪ್ರಕಾರವಾಗಿರಲಿಲ್ಲ. **“ಕಲೆಯು ಸಮಾಜಕ್ಕೆ ಹಿಡಿದ ಕನ್ನಡಿಯಲ್ಲ; ಸಮಾಜವನ್ನು ಒಳ್ಳೆಯ ರೀತಿಯಲ್ಲಿ ರೂಪಿಸಲು ಬಳಸಬೇಕಾದ ಸುತ್ತಿಗೆ. ಕಲೆಯೆಂಬುದು ರಾಜ್ಯ ವ್ಯವಸ್ಥೆಯಲ್ಲಿನ ಕೆಡುಕುಗಳನ್ನು ಮತ್ತು ಮಾನವರ ನಡುವಣ ಅಸಮಾನತೆಯನ್ನು ಗುರುತಿಸಿ ಜನರ ಗಮನಕ್ಕೆ ತರಲು ಮತ್ತು ಅವನ್ನು ಬುಡಮಟ್ಟ ಕಿತ್ತೆಸೆಯಲು ಜನಮನವನ್ನು ಪ್ರೇರೇಪಿಸುವ ಅರಿವು ಮತ್ತು ಎಚ್ಚರದ ಹತಾರವಾಗಬೇಕು. ಬರಹಗಾರರು ಮತ್ತು ಕಲಾವಿದರು ಸಾಮಾಜಿಕ ನ್ಯಾಯಕ್ಕಾಗಿ ಹೋರಾಡಬೇಕು”** ಎಂಬ ನಿಲುವನ್ನು ಬ್ರೆಕ್ಟ್ ಅವರು ಹೊಂದಿದ್ದರು. ಜನರಲ್ಲಿ ಕ್ರಿಟಿಕಲ್ ಧೋರಣೆಯು ಇದ್ದ ಮಾತ್ರಕ್ಕೆ ಮಾನವ ಸಮುದಾಯವನ್ನು ಕಾಡುತ್ತಿರುವ ಕೆಡುಕುಗಳು ನಾಶವಾಗುವುದಿಲ್ಲ. ಕೆಡುಕುಗಳ ನಾಶಕ್ಕೆ ಜನರ ರಚನಾತ್ಮಕವಾದ ಯೋಜನೆಗಳಿಂದ ಕಾರ್ಯರೂಪಕ್ಕೆ ಬರುವ ಕ್ರಿಯಾಶೀಲತೆಯು ಅತ್ಯಗತ್ಯವೆಂಬುದನ್ನು ಈ ಕವನದಲ್ಲಿ ಪ್ರತಿಪಾದಿಸಿದ್ದಾರೆ.

೨. ಕ್ರಿಟಿಕಲ್ ಧೋರಣೆಯನ್ನು ಹೊಂದಿರುವ ವ್ಯಕ್ತಿಗಳು ಕ್ರಿಯಾಶೀಲರಾದಾಗ ಸಮಾಜದಲ್ಲಿ ಎಂತಹ ಪರಿವರ್ತನೆಯಾಗುತ್ತದೆ ಎಂಬುದಕ್ಕೆ ಹತ್ತೊಂಬತ್ತನೆಯ ಶತಮಾನದಲ್ಲಿ ಇಂಡಿಯಾ ದೇಶದ ಮಹಾರಾಷ್ಟ್ರ ರಾಜ್ಯದಲ್ಲಿ ಜ್ಯೋತಿ ಬಾ ಫುಲೆ ಮತ್ತು ಸಾವಿತ್ರಿ ಬಾಯಿ ಫುಲೆ ದಂಪತಿಗಳು ಮಾಡಿದ ಸಮಾಜ ಸುಧಾರಣೆಯ ಕಾರ್ಯಗಳು ಸಾಕ್ಷಿಯಾಗಿವೆ. ಹಿಂದೂ ಧರ್ಮದ ಸಾಮಾಜಿಕ ವ್ಯವಸ್ಥೆಯಲ್ಲಿ ಜಾತಿಯೊಂದರ ಕಾರಣಕ್ಕಾಗಿಯೇ ಸಾವಿರಾರು ವರುಶಗಳಿಂದ ತುಳಿತಕ್ಕೆ ಒಳಗಾಗಿ ವಿದ್ಯೆ, ಅಧಿಕಾರ ಮತ್ತು ಸಂಪತ್ತಿನ ಒಡೆತನದಿಂದ ವಂಚಿತರಾಗಿದ್ದ ದಲಿತರಿಗೆ ಮತ್ತು ಎಲ್ಲ ಜಾತಿಮತದ ಹೆಂಗಸರಿಗೆ ಶಾಲೆಗಳನ್ನು ತೆರೆದು, ಅಕ್ಕರದ ವಿದ್ಯೆಯನ್ನು ಕಲಿಸುವ ಮೂಲಕ ಜನರಲ್ಲಿ ಅರಿವು ಮತ್ತು ಎಚ್ಚರವನ್ನು ಮೂಡಿಸುವ ಕಾರ್ಯವನ್ನು ಕಯ್ಗೊಂಡರು. ವಿದ್ಯೆಯ ಪ್ರಸಾರದಲ್ಲಿ ಫುಲೆ ದಂಪತಿಗಳು ತೊಡಗಿದಾಗ ಮೇಲು ಜಾತಿಯ ಕೆಲವು ಕೆಟ್ಟ ವ್ಯಕ್ತಿಗಳಿಂದ ಹತ್ತಾರು ಬಗೆಯಲ್ಲಿ ಹಿಂಸೆ ಮತ್ತು ಅಪಮಾನವಾದರೂ ಹಿಂಜರಿಯದೆ ಕೆಳಜಾತಿ ಮತ್ತು ಕೆಳವರ್ಗದ ಜನರ ಪರವಾಗಿ ನಿಂತು, ತಮ್ಮ ಕಾರ್ಯವನ್ನು ಮುಂದುವರಿಸಿದರು.

ಫುಲೆ ದಂಪತಿಗಳ ಈ ಹೋರಾಟ ಮತ್ತು ಸಮಾಜ ಸುಧಾರಣೆಯ ಕಾರ್ಯಗಳೇ ಇಪ್ಪತ್ತನೆಯ ಶತಮಾನದಲ್ಲಿ ಮಹಾ ಮಾನವತಾವಾದಿ ಬಿ.ಆರ್.ಅಂಬೇಡ್ಕರ್ ಅವರಿಗೆ ಪ್ರೇರಣೆಯಾಗಿ ದಾರಿದೀಪವಾಯಿತು. ಅಂಬೇಡ್ಕರ್ ಅವರ **"ವಿದ್ಯೆಯ ಕಲಿಕೆ–ಸಂಘಟನೆ–ಹೋರಾಟ"** ಎಂಬ ಕರೆಗೆ ಅನುಗುಣವಾಗಿ ನಡೆದ ಹಂತ ಹಂತದ ಕ್ರಿಯಾಶೀಲತೆಯಿಂದಾಗಿ, ಇಂದು ಕೆಳಜಾತಿ ಮತ್ತು ಕೆಳವರ್ಗಕ್ಕೆ ಸೇರಿದ ಕೋಟಿಗಟ್ಟಲೆ ಜನರು ತಲೆಯೆತ್ತಿ ಬಾಳುವಂತಹ ಬದುಕನ್ನು ರೂಪಿಸಿಕೊಳ್ಳಲು ನೆರವಾಗಿದೆ.



# ೧೯. ಊರುಗೋಲುಗಳು

**ಅನುವಾದ: ಅಂಕುರ್ ಬೆಟಗೇರಿ**

ಏಳು ವರ್ಷ ನಾನೊಂದೂ ಹೆಜ್ಜೆಯನ್ನು ನಡೆಯಲಿಲ್ಲ
ವೈದ್ಯ ಮಹಾಶಯನ ಬಳಿ ಬಂದಾಗ
ಅವ ಕೇಳಿದ: **ಏಕೆ, ಈ ಊರುಗೋಲುಗಳು**
ನಾನೆಂದೆ: **ನಾನು ಹೆಳವ.**

ಅವನು ಉತ್ತರಿಸಿದ: **ಅದರಲ್ಲೇನೂ ಆಶ್ಚರ್ಯವಿಲ್ಲ**
**ಇನ್ನೊಂದು ಬಾರಿ**
**ಪ್ರಯತ್ನವನ್ನಾದರೂ ಮಾಡುವಂಥವನಾಗು**
**ನೀನೇನಾದರೂ ಹೆಳವನಾಗಿದ್ದರೆ**
**ಅದು ಈ ಊರುಗೋಲುಗಳಿಂದ**
**ಆದ್ದರಿಂದ ಬೀಳುನೆಲದ ಮೇಲೆ ತೆವಳು.**

ಅವನು ನನ್ನ ಪ್ರೀತಿಯ ಊರುಗೋಲುಗಳನ್ನು
ತೆಗೆದುಕೊಂಡು ನಗುತ್ತಾ
ದೈತ್ಯನಂತೆ ಮುಖ ಕಿವುಚುತ್ತಾ
ಅವುಗಳನ್ನು ನನ್ನ ಬೆನ್ನ ಹಿಂದೆ ಹಿಡಿದು ಮುರಿದ
ಬೆಂಕಿ ಒಲೆಯೊಳಗೆ ಎಸೆದ.

ಈಗ ನಾನು ಸರಿಹೋಗಿದ್ದೇನೆ
ನಾನು ನಡೆಯಬಲ್ಲೆ
ಬರೀ ನಗುವಿನಿಂದಲೇ ನಾನು ವಾಸಿಯಾಗಿದ್ದೇನೆ
ಆದರೆ ಕೆಲವೊಮ್ಮೆ
ಊರುಗೋಲುಗಳನ್ನು ನೋಡಿದಾಗ
ನನ್ನ ನಡಿಗೆ
ಕೆಲವು ಗಂಟೆಗಳ ತನಕ ಕಷ್ಟಕರವಾಗುತ್ತದೆ.

**ವ್ಯಕ್ತಿಯು ತನ್ನ ಮಯ್ ಮನವನ್ನು ಆವರಿಸಿಕೊಂಡಿರುವ ಪರಾವಲಂಬಿತನ ವನ್ನು ತೊಡೆದುಕೊಂಡು, ತನ್ನಲ್ಲಿ ತಾನು ನಂಬಿಕೆಯನ್ನು ತಳೆದು, ಸ್ವಾವಲಂಬಿಯಾಗಿ ಬಾಳಬೇಕಾದ ಅಗತ್ಯವನ್ನು ಈ ಕವನದಲ್ಲಿ ನಾಟಕೀಯ ಪ್ರಸಂಗವೊಂದರ ಮೂಲಕ ಚಿತ್ರಿಸಲಾಗಿದೆ.**

ಪರಾವಲಂಬಿತನ=ವ್ಯಕ್ತಿಯು ಇತರರನ್ನು ಆಶ್ರಯಿಸಿ, ಜೀವನದ ಉದ್ದಕ್ಕೂ ಬೇರೆಯವರ ನೆರವಿನಿಂದಲೇ ತನ್ನ ಬದುಕನ್ನು ನಡೆಸುವುದು;

ಸ್ವಾವಲಂಬಿತನ=ವ್ಯಕ್ತಿಯು ಜೀವನದ ಉದ್ದಕ್ಕೂ ಪ್ರಯತ್ನಶೀಲತೆ ಮತ್ತು ದಿಟ್ಟತನದ ನಡೆನುಡಿಯಿಂದ ತನ್ನ ಬದುಕನ್ನು ರೂಪಿಸಿಕೊಂಡು ಬಾಳುವುದು;

ಊರುಗೋಲುಗಳನ್ನು ಆಶ್ರಯಿಸಿ ನಡೆದಾಡುವ ವ್ಯಕ್ತಿ ಮತ್ತು ರೋಗಗಳನ್ನು ಗುಣಪಡಿಸುವ ಡಾಕ್ಟರ್ ನಡುವಣ ಮಾತುಕತೆಯಿಂದ ಕವನ ಮೊದಲುಗೊಳ್ಳುತ್ತದೆ;

ಊರು+ಕೋಲು=ಊರುಗೋಲು; ಊರು=ಗಟ್ಟಿಯಾಗಿ ನಿಲ್ಲು/ನೆಲೆಯಾಗಿ ನಿಲ್ಲು; ಕೋಲು=ದೊಣ್ಣೆ/ಬಡಿಗೆ/ಮರದ ಉದ್ದನೆಯ ತುಂಡು;

ಊರುಗೋಲು=ವ್ಯಕ್ತಿಯು ನಡೆಯುವಾಗ ಬೀಳುವುದನ್ನು ತಡೆಗಟ್ಟಲೆಂದು ಕಯ್ಯಲ್ಲಿ ಹಿಡಿಯುವ ಕೋಲು ಇಲ್ಲವೇ ಕಂಕುಳಿನಲ್ಲಿ ಇಟ್ಟುಕೊಳ್ಳುವ ಕೋಲು / ಕುಂಟನಾದ ಅಂದರೆ ಎರಡು ಕಾಲುಗಳಲ್ಲಿ ಯಾವುದಾದರೂ ಒಂದು ಕಾಲನ್ನು ನೆಲದ ಮೇಲೆ ಊರಿ ನಡೆಯಲಾಗದ ವ್ಯಕ್ತಿಯು ಕಾಲಿಗೆ ಬದಲು ಆಸರೆಯಾಗಿ ಬಳಸುವ ಕೋಲು;

ಮಹಾಶಯ=ಗಂಡಸಿಗೆ ಹೆಚ್ಚಿನ ಮನ್ನಣೆಯನ್ನು ನೀಡುವಾಗ ಬಳಸುವ ಪದ/ ದೊಡ್ಡ ವ್ಯಕ್ತಿ; ಹೆಳವ=ಕುಂಟ/ಕಾಲಿಲ್ಲದವನು;

**ಏಳು ವರ್ಷ ನಾನೊಂದೂ ಹೆಜ್ಜೆಯನ್ನು ನಡೆಯಲಿಲ್ಲ. ವೈದ್ಯ ಮಹಾಶಯನ ಬಳಿ ಬಂದಾಗ, ಅವ ಕೇಳಿದ: ಏಕೆ, ಈ ಊರುಗೋಲುಗಳು... ನಾನೆಂದೆ: ನಾನು ಹೆಳವ=** ಕಳೆದ ಏಳು ವರುಶಗಳಿಂದ ಊರುಗೋಲನ್ನು ಬಿಟ್ಟು ಒಂದು ಹೆಜ್ಜೆಯನ್ನು ಇಟ್ಟಿಲ್ಲದ ವ್ಯಕ್ತಿಯೊಬ್ಬ ತನ್ನ ತೊಂದರೆಯನ್ನು ಡಾಕ್ಟರ್ ಬಳಿ ಹೇಳಿಕೊಂಡು ಚಿಕಿತ್ಸೆಯನ್ನು ಪಡೆಯಲು ಬರುತ್ತಾನೆ. ತನ್ನ ಅಂಗವಿಕಲತೆಯನ್ನು ಹೋಗಲಾಡಿಸಿ ಕೊಳ್ಳಬೇಕೆಂಬ ಮನಸ್ಸು ಈಗ ಈ ವ್ಯಕ್ತಿಗೆ ಬಂದಿದೆ. ಇಂತಹ ಆಲೋಚನೆಯು ಒಂದು ಆರೋಗ್ಯಕರವಾದ ಬೆಳವಣಿಗೆಯಾಗಿದೆ. ಏಕೆಂದರೆ ಯಾವುದೇ ಒಬ್ಬ

ವ್ಯಕ್ತಿಯು ತನ್ನ ಮಯ್ ಮನದ ಅರೆಕೊರೆಯನ್ನು ತಾನೇ ಅರಿತುಕೊಂಡು, ಅದನ್ನು ಸರಿಪಡಿಸಿಕೊಳ್ಳಬೇಕೆಂದು ಮನಸ್ಸು ಮಾಡುವುದು ಮೊದಲ ಹಂತವಾಗಿದ್ದರೆ, ತಿಳಿದವರನ್ನು ಸಂಪರ್ಕಿಸಿ, ಅವರಿಂದ ಪರಿಹಾರದ ರೀತಿಯನ್ನು ಅರಿತುಕೊಂಡು ಅದರಂತೆ ನಡೆದುಕೊಳ್ಳುವುದು ಎರಡನೆಯ ಹಂತವಾಗಿರುತ್ತದೆ;

ತನ್ನ ಮುಂದೆ ಬಂದು ನಿಂತ ವ್ಯಕ್ತಿಯನ್ನು ಡಾಕ್ಟರ್ ಅಡಿಯಿಂದ ಮುಡಿಯ ವರೆಗೆ ನೋಡನೋಡುತ್ತಿದ್ದಂತೆಯೇ ಡಾಕ್ಟರಿಗೆ ಒಂದು ವಾಸ್ತವದ ಸಂಗತಿಯು ಮನದಟ್ಟಾಗುತ್ತದೆ. ಅದೇನೆಂದರೆ ತನ್ನ ಮುಂದೆ ಬಂದು ನಿಂತಿರುವ ವ್ಯಕ್ತಿಯು ನಡೆದಾಡಲು ಊರುಗೋಲುಗಳ ಅಗತ್ಯವಿಲ್ಲ. ತಾನು ಅಂಗವಿಕಲನೆಂಬ ತಪ್ಪು ಗ್ರಹಿಕೆಗೆ ಮತ್ತು ಮಾನಸಿಕ ಹಿಂಜರಿಕೆಗೆ ವ್ಯಕ್ತಿಯು ಒಳಗಾಗಿದ್ದಾನೆ. ಆದ್ದರಿಂದ ಈಗ ಈತನಿಗೆ ಬೇಕಾಗಿರುವುದು ಅಂಗಚಿಕಿತ್ಸೆಯಲ್ಲ; ಮಾನಸಿಕ ಚಿಕಿತ್ಸೆ ಎಂಬ ನಿಲುವನ್ನು ತಳೆದ ಡಾಕ್ಟರ್ ವ್ಯಕ್ತಿಯನ್ನು ಪ್ರಶ್ನಿಸುತ್ತಾನೆ.

**"ಏಕೆ ಈ ಊರುಗೋಲುಗಳು"** ಆ ವ್ಯಕ್ತಿಯು ಮರುಗಳಿಗೆಯಲ್ಲಿಯೇ **"ನಾನು ಹೆಳವ"** ಎಂದು ಉತ್ತರಿಸುತ್ತಾನೆ. ತಾನು ಹೆಳವನೆಂಬ ಗ್ರಹಿಕೆಯು ಆತನ ಮನದಲ್ಲಿ ಅಚ್ಚೊತ್ತಿದಂತಿದೆ. ಆದ್ದರಿಂದಲೇ ಆತ ಊರುಗೋಲುಗಳನ್ನು ಆಸರೆಯಾಗಿ ಅವಲಂಬಿಸಿದ್ದಾನೆ.

ತೆವಳು=ಪಾದಗಳ ಸಹಾಯವಿಲ್ಲದೆ ಇಡೀ ದೇಹವನ್ನು ಮುಂದೆ ಮುಂದೆ ಚಲಿಸುವಂತೆ ಮಾಡುವುದು/ದೇಕು;

**ಇನ್ನೊಂದು ಬಾರಿ ಪ್ರಯತ್ನವನ್ನಾದರೂ ಮಾಡುವಂಥವನಾಗು ನೀನೇನಾದರೂ ಹೆಳವನಾಗಿದ್ದರೆ ಅದು ಈ ಊರುಗೋಲುಗಳಿಂದ ಆದ್ದರಿಂದ ಬೀಳುನೆಲದ ಮೇಲೆ ತೆವಳು=** ಈಗ ಡಾಕ್ಟರ್ ಆ ವ್ಯಕ್ತಿಗೆ ಮಾನಸಿಕ ಚಿಕಿತ್ಸೆಯನ್ನು ನೀಡಲು ಮುಂದಾಗಿ ನೀನು ಕುಂಟನಾಗಿರುವುದಕ್ಕೆ ಈ ಊರುಗೋಲುಗಳು ಇಲ್ಲದೆ ನಡೆಯಲಾರೆನು ಎಂಬ ನಿನ್ನ ಮನದ ಹಿಂಜರಿಕೆ ಕಾರಣವಾಗಿದೆಯೇ ಹೊರತು ನಿನ್ನ ಕಾಲುಗಳಲ್ಲಿ ಯಾವ ಊನತೆಯು ಕಂಡುಬರುತ್ತಿಲ್ಲ ಎಂದು ಹೇಳುತ್ತಾರೆ.

ಡಾಕ್ಟರ್ ತನ್ನ ಬಳಿಬಂದ ವ್ಯಕ್ತಿಯ ಹೆಳವತನ ಎಲ್ಲಿದೆ ಎಂದು ಗುರುತಿಸಿದ್ದು ಮಾತ್ರವಲ್ಲದೆ, ಅದನ್ನು ಸರಿಪಡಿಸಿಕೊಳ್ಳುವ ಜವಾಬ್ದಾರಿಯನ್ನು ಆತನ ಪಾಲಿಗೆ ವಹಿಸುತ್ತಾರೆ. ಯಾವುದೇ ವ್ಯಕ್ತಿಯಾಗಲಿ ತನ್ನ ಮಯ್ ಮನದ ತಪ್ಪುಗ್ರಹಿಕೆಗಳನ್ನು ತಾನೇ ಸರಿಪಡಿಸಿಕೊಳ್ಳಬೇಕೆ ಹೊರತು, ಅವನ್ನು ಮತ್ತೊಬ್ಬರ ಹೇಳಿಕೆಯಿಂದ ಸರಿಪಡಿಸಲು ಆಗುವುದಿಲ್ಲವೆಂಬ ವಾಸ್ತವವನ್ನು ಡಾಕ್ಟರ್ ಅರಿತಿದ್ದಾರೆ. ವ್ಯಕ್ತಿಯ

ತಪ್ಪುಗ್ರಹಿಕೆಯನ್ನು ಹೋಗಲಾಡಿಕೊಳ್ಳಲೆಂದು ಅವನಿಗೆ ಸೂಚನೆಯನ್ನು ನೀಡುತ್ತಾರೆ. ಊರುಗೋಲುಗಳನ್ನು ಅತ್ತ ಬಿಸಾಡು. ಆಗ ನೀನು ನಡೆಯಲಾಗದಿದ್ದರೆ, ಹೆದರಬೇಡ. ಕೆಳಕ್ಕೆ ಬೀಳು. ಬಿದ್ದ ಎಡೆಯಿಂದ ಮತ್ತೊಂದು ಎಡೆಗೆ ತೆವಳುತ್ತಾ ಸಾಗಿ, ಮತ್ತೆ ಮೇಲೆದ್ದು ನಿಲ್ಲಲು ದಿಟ್ಟತನದಿಂದ ಪ್ರಯತ್ನಿಸು .

ಡಾಕ್ಟರ್ ನೀಡುತ್ತಿರುವ ಸಲಹೆಯ ನುಡಿಗಳು ಬಿದ್ದ ಕಡೆಯಲ್ಲಿಯೇ ಬಿದ್ದಿರಬಾರದು, ಎಂತಾದರೂ ಮಾಡಿ ಮುಂದೆ ಮುಂದೆ ಸಾಗುತ್ತಿರಬೇಕು. ಹತಾಶೆಗಾಗಲಿ ಇಲ್ಲವೇ ನನ್ನಿಂದಾಗುವುದಿಲ್ಲವೆಂಬ ಹಿಂಜರಿಕೆಗಾಗಲಿ ಒಳಗಾಗದೆ, ವ್ಯಕ್ತಿಯು ತನ್ನ ಶಕ್ತಿಯನ್ನೆಲ್ಲ ಬಳಸಿಕೊಂಡು ಮುನ್ನಡೆಯಲು ಪ್ರಯತ್ನಿಸುತ್ತಲೇ ಇರಬೇಕು ಎಂಬ ಆತ್ಮವಿಶ್ವಾಸದ ಮತ್ತು ಸ್ವಾವಲಂಬಿತನದ ವ್ಯಕ್ತಿತ್ವವನ್ನು ವ್ಯಕ್ತಿಯ ಮನದಲ್ಲಿ ಮೂಡಿಸುತ್ತಿವೆ:

ದೈತ್ಯ=ರಕ್ಕಸ; ಕಿವುಚು=ಹಿಸುಕು/ಹಿಂಡು; **ಮುಖ ಕಿವುಚು**=ಇದೊಂದು ನುಡಿಗಟ್ಟು. ಕೋಪ/ತಿರಸ್ಕಾರ/ಅಣಕ ಮುಂತಾದ ಒಳಮಿಡಿತಗಳು ಮನದಲ್ಲಿ ಮೂಡಿದಾಗ, ಮೊಗದ ತೊಗಲಿನ ಸುಕ್ಕುಗಟ್ಟಿದಂತಾಗುತ್ತದೆ;

**ದೈತ್ಯನಂತೆ ಮುಖ ಕಿವುಚುತ್ತಾ**=ರಕ್ಕಸನಂತೆ ಕೋಪೋದ್ರೇಕ ಮತ್ತು ತಿರಸ್ಕಾರವನ್ನು ವ್ಯಕ್ತಪಡಿಸುತ್ತಾ;

**ಅವನು ನನ್ನ ಪ್ರೀತಿಯ ಊರುಗೋಲುಗಳನ್ನು ತೆಗೆದುಕೊಂಡು ನಗುತ್ತಾ ದೈತ್ಯನಂತೆ ಮುಖ ಕಿವುಚುತ್ತಾ, ಅವುಗಳನ್ನು ನನ್ನ ಬೆನ್ನ ಹಿಂದೆ ಹಿಡಿದು ಮುರಿದ ಬೆಂಕಿ ಒಲೆಯೊಳಗೆ ಎಸೆದ**=ಹೆಳವನಾಗಿದ್ದೇನೆಂದು ತೊಳಲಾಡುತ್ತಿದ್ದ ನನಗೆ ಡಾಕ್ಟರ್ ಕೇವಲ ಸಲಹೆಯನ್ನು ಮಾತ್ರ ನೀಡಿ ಸುಮ್ಮನಾಗಲಿಲ್ಲ. ನನ್ನನ್ನು ನೋಡಿ ಅಣಕ ಮಾಡುವಂತೆ ನಗುತ್ತ, ಮರುಗಳಿಗೆಯಲ್ಲಿಯೇ ಕೋಪೋದ್ರೇಕ ಮತ್ತು ತಿರಸ್ಕಾರದ ಒಳಮಿಡಿತಗಳನ್ನು ತೀವ್ರವಾಗಿ ಹೊರಹಾಕುತ್ತ, ನನ್ನ ಕಂಕುಳು ಗಳಲ್ಲಿದ್ದ ಎರಡು ಊರುಗೋಲುಗಳನ್ನು ಜಡಿದು ಕಿತ್ತುಕೊಂಡು, ಅವನ್ನು ನನ್ನ ಬೆನ್ನ ಹಿಂದೆ ಹಿಡಿದು ಮುರಿದು ಒಲೆಯೊಳಗೆ ಉರಿಯುತ್ತಿರುವ ಬೆಂಕಿಗೆ ಎಸೆದು, ನನ್ನ ಊರುಗೋಲುಗಳನ್ನೇ ಸುಟ್ಟು ಬೂದಿ ಮಾಡಿದ;

ಊರುಗೋಲುಗಳನ್ನು ಬೆಂಕಿಗೆ ಹಾಕಿದ ಡಾಕ್ಟರ್ ಅವರ ಕ್ರಿಯೆಯು ಒಳ್ಳೆಯ ಉದ್ದೇಶದಿಂದ ಕೂಡಿದೆ. ವ್ಯಕ್ತಿಯ ತಪ್ಪುಗ್ರಹಿಕೆಯಿಂದ ಇದುವರೆಗೂ ಆಸರೆ ಯಾಗಿದ್ದ ಊರುಗೋಲುಗಳೇ ಇಲ್ಲದಂತಾದಾಗ, ವ್ಯಕ್ತಿಯು ನಡೆದಾಡಲು ಅನಿವಾರ್ಯವಾಗಿ ಸ್ವಾವಲಂಬಿಯಾಗಬೇಕಾಗುತ್ತದೆ. ವ್ಯಕ್ತಿಯು ತನ್ನ ಜೀವನದಲ್ಲಿ

ಯಾವುದೇ ಬಗೆಯ ಅರೆಕೊರೆಯನ್ನು ಹೋಗಲಾಡಿಸಿಕೊಳ್ಳಬೇಕಾದರೆ ಇಲ್ಲವೇ ಅಡೆತಡೆಯನ್ನು ನಿವಾರಿಸಿಕೊಳ್ಳಬೇಕಾದರೆ, ಇತರರನ್ನು ಅವಲಂಬಿಸುವ ಬದಲು ತನ್ನಲ್ಲಿ ತಾನು ನಂಬಿಕೆಯನ್ನಿಟ್ಟುಕೊಂಡು, ಅದರ ಪರಿಹಾರಕ್ಕಾಗಿ ಪ್ರಯತ್ನ ಶೀಲನಾಗಿ ಪರಿಶ್ರಮಪಡಬೇಕು ಎಂಬ ಸಂದೇಶವನ್ನು ಊರುಗೋಲುಗಳ ಸುಡುವಿಕೆಯು ಸೂಚಿಸುತ್ತಿದೆ;

**ಈಗ ನಾನು ಸರಿಹೋಗಿದ್ದೇನೆ... ನಾನು ನಡೆಯಬಲ್ಲೆ**=ನನ್ನ ಮಯ್ ಮನದಲ್ಲಿದ್ದ ಹಿಂಜರಿಕೆ ಮತ್ತು ಪರಾವಲಂಬಿತನ ಈಗ ಇಲ್ಲವಾಗಿದೆ. ಡಾಕ್ಟರ್ ಅವರ ಸಲಹೆಯನ್ನು ನಾನು ಒಪ್ಪಿಕೊಂಡು, ಅದರಂತೆ ದಿಟ್ಟತನದಿಂದ ಪ್ರಯತ್ನಗಳನ್ನು ನಡೆಸಿದ್ದರಿಂದ ಈಗ ನನಗೆ ಊರುಗೋಲುಗಳು ಬೇಕಾಗಿಲ್ಲ. ಸ್ವತಂತ್ರವಾಗಿ ನಡೆಯಬಲ್ಲೆ;

ನಗು=ಉತ್ಸಾಹ, ಚಟುವಟಿಕೆ ಮತ್ತು ಆನಂದದ ಸಂಕೇತ; ವಾಸಿ=ವ್ಯಕ್ತಿಗೆ ಬಂದಿರುವ ರೋಗವು ಇಲ್ಲವಾಗುವುದು;

**ಬರೀ ನಗುವಿನಿಂದಲೇ ನಾನು ವಾಸಿಯಾಗಿದ್ದೇನೆ**=ಈ ನುಡಿಗಳು ರೂಪಕದ ತಿರುಳಿನಲ್ಲಿ ಬಳಕೆಗೊಂಡಿವೆ. ಜೀವನದಲ್ಲಿನ ಅಡೆತಡೆಗಳನ್ನು ಎದುರಿಸುವಾಗ ನಾನು ತಳೆದ ದಿಟ್ಟತನ ಮತ್ತು ಸ್ವಾವಲಂಬಿಯಾಗಿ ನಾನು ಮಾಡಿದ ಪ್ರಯತ್ನಗಳು **“ನಾನು ನಡೆಯಲಾರೆ. ನಾನು ಹೆಳವ”** ಎಂಬ ತಪ್ಪುಗ್ರಹಿಕೆ ಮತ್ತು ಕೀಳರಿಮೆಯನ್ನು ತೊಡೆದುಹಾಕಿವೆ. ಈಗ ನಾನು ಜೀವನದಲ್ಲಿ ಉತ್ಸಾಹ, ಚಟುವಟಿಕೆ ಮತ್ತು ಆನಂದದಿಂದ ನಗುನಗುತ್ತಾ ಬಾಳುತ್ತಿದ್ದೇನೆ. ನನ್ನ ಮಯ್ ಮನದಲ್ಲಿದ್ದ ತಪ್ಪುಗ್ರಹಿಕೆಯು ತೊಲಗಿದೆ;

**ಆದರೆ ಕೆಲವೊಮ್ಮೆ ಊರುಗೋಲುಗಳನ್ನು ನೋಡಿದಾಗ ನನ್ನ ನಡಿಗೆ ಕೆಲವು ಗಂಟೆಗಳ ತನಕ ಕಷ್ಟಕರವಾಗುತ್ತದೆ**=ಈ ನುಡಿಗಳು ರೂಪಕದ ತಿರುಳಿನಲ್ಲಿ ಬಳಕೆಗೊಂಡಿವೆ. ಊರುಗೋಲುಗಳನ್ನಿಟ್ಟುಕೊಂಡು ನಡೆಯುವವರನ್ನು ಕಂಡಾಗ ಕೆಲವೊಮ್ಮೆ ನನಗೆ ಹಿಂದಿನ ನೆನಪು ಬಂದು ನನ್ನ ನಡಿಗೆ ಕೆಲಕಾಲ ಕುಂಟಿತಗೊಂಡು ನಡೆಯುವುದಕ್ಕೆ ತೊಂದರೆಯಾಗುತ್ತದೆ. ಅಂದರೆ ಈ ಮೊದಲು ಹಿಂಜರಿಕೆ ಮತ್ತು ಪರಾವಲಂಬಿತನದಿಂದ ನನ್ನ ಮಯ್ ಮನಸ್ಸು ಹೇಗೆ ಬಲಹೀನಗೊಂಡಿದ್ದವೋ ಅಂತೆಯೇ ಆಗುತ್ತದೆ.

ಈ ನುಡಿಗಳು ಒಂದು ಕಟು ವಾಸ್ತವವನ್ನು ಹೇಳುತ್ತವೆ. ಅದೇನೆಂದರೆ ಪ್ರತಿಯೊಬ್ಬ ವ್ಯಕ್ತಿಯ ಮಯ್ ಮನದಲ್ಲಿಯೂ ಒಂದಲ್ಲ ಒಂದು ಬಗೆಯ

ತಪ್ಪುಗ್ರಹಿಕೆಯು ನೆಲೆಗೊಂಡಿರುತ್ತದೆ. ಅದನ್ನು ಪ್ರಯತ್ನಪೂರ್ವಕವಾಗಿ ತೊಡೆದು ಹಾಕಲು ವ್ಯಕ್ತಿಯು ಪ್ರಯತ್ನಿಸಿದರೂ ಸಂಪೂರ್ಣವಾಗಿ ನಾಶವಾಗದೆ, ಮನದಲ್ಲಿ ಸುಪ್ತವಾಗಿ ಅಡಗಿರುತ್ತದೆ. ಆದ್ದರಿಂದ ವ್ಯಕ್ತಿಯು ಜೀವನದಲ್ಲಿ ಮತ್ತೆ ಅಂತಹ ತಪ್ಪುಗ್ರಹಿಕೆಯು ಮರುಕಳಿಸದಂತೆ ನೋಡಿಕೊಳ್ಳುವ ಎಚ್ಚರವನ್ನು ಹೊಂದಿರಬೇಕು ಮತ್ತು ಮಾನಸಿಕವಾಗಿ ಕುಗ್ಗಬಾರದು.



# ಅನುವಾದಕರು

೧. **ಶಾ.ಬಾಲುರಾವ್** ಅವರ ಜನ್ಮಸ್ಥಳ ಶ್ರೀರಂಗಪಟ್ಟಣ, ಮಂಡ್ಯ ಜಿಲ್ಲೆ. ದೆಹಲಿಯಲ್ಲಿರುವ ಕೇಂದ್ರ ಸಾಹಿತ್ಯ ಅಕಾಡೆಮಿಯಲ್ಲಿ ಉದ್ಯೋಗಿಯಾಗಿದ್ದರು. ಸಾಹಿತ್ಯ ಅಕಾಡೆಮಿಯಿಂದ ಇಂಗ್ಲಿಶಿನಲ್ಲಿ ಪ್ರಕಟವಾಗುತ್ತಿದ್ದ 'ಇಂಡಿಯನ್ ಲಿಟರೇಚರ್' ಸಾಹಿತ್ಯ ಸಂಚಿಕೆಯ ಸಂಪಾದಕರಾಗಿದ್ದರು. ಇಂಗ್ಲಿಶ್ ಮತ್ತು ಕನ್ನಡ ಎರಡು ಭಾಷೆಗಳಲ್ಲಿಯೂ ಮೌಲಿಕವಾದ ಬರವಣಿಗೆಯನ್ನು ಮಾಡಿದ್ದಾರೆ.

ಸ್ವತಂತ್ರವಾಗಿ ಕಥೆಗಳನ್ನು ಬರೆಯುವುದರ ಜತೆಗೆ ಹಿಂದಿ, ಬಂಗಾಳಿ ಮತ್ತು ರಷ್ಯನ್ ಭಾಷೆಗಳಿಂದ ನೇರವಾಗಿ ಕಥೆಗಳನ್ನು ಮತ್ತು ಕವಿತೆಗಳನ್ನು ಅನುವಾದ ಮಾಡಿರುವುದು ಶಾ.ಬಾಲುರಾವ್ ಅವರ ಹೆಗ್ಗಳಿಕೆ.

## ಪ್ರಮುಖ ಕೃತಿಗಳು

೧. **ಬೆರ್ಟೋಲ್ಟ್ ಬ್ರೆಷ್ಟ್ : ಎಂಬತ್ತು ಕವಿತೆಗಳು**
ಮೂಲ ಜರ್ಮನ್ ಭಾಷೆಯಿಂದ ಚಯನ ಮತ್ತು ಅನುವಾದ.
ರಾಯನರ್ ಲೋತ್ಸ್‌ರ ಸಹಾಯದಿಂದ.

೨. **ಉಮರ ಸಂದೇಶ**
ಉಮ್ರ್ ಖಯ್ಯಾಮ್–ಫಿಟ್ಸ್ ಜೆರಾಲ್ಡ್‌ರ ಇನ್ನೂರೇಳು ರುಬಾಯಿಗಳು
ಲಿಪ್ಯಂತರ ಮತ್ತು ಅನುವಾದ.
ಮೂಲ ಫಾರಸೀ ಮತ್ತು ಇಂಗ್ಲಿಷಿನಿಂದ.

೩. **ಷೇಕ್ಸ್ಪಿಯರಿಗೆ ನಮಸ್ಕಾರ**
ಸಂಪಾದನ ಮತ್ತು ಮುದ್ರಣ ವಿನ್ಯಾಸ: ಶಾ.ಬಾಲುರಾವ್

## ೨. ಯು.ಆರ್.ಅನಂತಮೂರ್ತಿ (೧೯೩೨–೨೦೧೪)

ಹುಟ್ಟಿದ ಊರು: ಮೇಳಿಗೆ, ಶಿವಮೊಗ್ಗ ಜಿಲ್ಲೆ. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಇಂಗ್ಲಿಶ್ ಪ್ರಾಧ್ಯಾಪಕರಾಗಿದ್ದರು. ಕವಿ, ಕತೆಗಾರ, ವಿಮರ್ಶಕ ಕಾದಂಬರಿಕಾರ ಮತ್ತು ಅನುವಾದಕರಾಗಿ ಕೃತಿಗಳನ್ನು ರಚಿಸಿದ್ದಾರೆ. ಜ್ಞಾನಪೀಠ ಪ್ರಶಸ್ತಿ ಪುರಸ್ಕೃತರು.

### ಪ್ರಮುಖ ಕೃತಿಗಳು

**ಅ) ಕಾದಂಬರಿ:**
ಸಂಸ್ಕಾರ – ಭಾರತೀಪುರ–ಅವಸ್ಥೆ–ಭವ

**ಆ) ಕಥಾ ಸಂಕಲನ:**
ಎಂದೆಂದೂ ಮುಗಿಯದ ಕಥೆ– ಪ್ರಶ್ನೆ–ಮೌನಿ–ಆಕಾಶ ಮತ್ತು ಬೆಕ್ಕು–ಸೂರ್ಯನ ಕುದುರೆ

**ಇ) ಸಾಹಿತ್ಯ ವಿಮರ್ಶೆ ಮತ್ತು ಪ್ರಬಂಧ**
ಪ್ರಜ್ಞೆ ಮತ್ತು ಪರಿಸರ–ಸನ್ನಿವೇಶ–ಸಮಕ್ಷಮ–ಪೂರ್ವಾಪರ–ಬೆತ್ತಲೆ ಪೂಜೆ ಯಾಕೆ ಕೂಡದು–ಮಾತು ಸೋತ ಭಾರತ–ಋಜುವಾತು

**ಈ) ಕವನ ಸಂಕಲನ:**
ಅಜ್ಜನ ಹೆಗಲ ಸುಕ್ಕುಗಳು–ಮಿಥುನ

## ೩. ಕೆ.ಫಣಿರಾಜ್

ಅವರು ಮೂಲತಃ ಬಳ್ಳಾರಿ ಜಿಲ್ಲೆಯ ಕಂಪ್ಲಿಯವರು. ೧೯೬೨ರಲ್ಲಿ ಕಂಪ್ಲಿಯಲ್ಲಿ ಜನಿಸಿದ ಇವರು ಸಿವಿಲ್ ಇಂಜಿನಿಯರಿಂಗ್ ವಿದ್ಯೆಯಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದು ಮಣಿಪಾಲದ ಇಂಜಿನಿಯರಿಂಗ್ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ, ಇದೀಗ ಉಡುಪಿಯಲ್ಲಿ ನೆಲೆಸಿದ್ದಾರೆ. ಲೇಖಕರಾಗಿ, ಅನುವಾದಕರಾಗಿ ಮತ್ತು ಸಂಪಾದಕರಾಗಿ ಅನೇಕ ಕೃತಿಗಳನ್ನು ರಚಿಸಿದ್ದಾರೆ.

**ಪ್ರಮುಖ ಕೃತಿಗಳು:**

೧. ಅಂಟೋನಿಯೊ ಗ್ರಾಮ್ಷಿ

೨. **ಕೋಮುವಾದದ ಕರಾಳ ಮುಖಗಳು**
ಸಹ ಲೇಖಕರು: ಕೆ.ಫಣಿರಾಜ್–ಜಿ.ರಾಜಶೇಖರ್–ಎಸ್.ಆರ್.ಭಟ್

೩. **ಕೋಮುವಾದದ ರಾಜಕೀಯ**
ಸಹ ಲೇಖಕರು: ಕೆ.ಫಣಿರಾಜ್–ಜಿ.ರಾಜಶೇಖರ್–ಫಕೀರ್ ಮಹಮದ್ ಕಟ್ಪಾಡಿ

೪. **ಅಂಬೇಡ್ಕರರ ಆಯ್ದ ಬರಹಗಳು**
ಸಂಪಾದನೆ ಮತ್ತು ಅನುವಾದ

೫. **ಅಸಮಾನತೆಯ ಬಣ್ಣಗಳು**
ಸಂಪಾದಕರು: ಕೆ.ಫಣಿರಾಜ್–ಜಿ.ರಾಜಶೇಖರ್

## ೪. ಅಂಕುರ್ ಬೆಟಗೇರಿ

ಬೆಂಗಳೂರಿನಲ್ಲಿ ೧೯೮೫ರಲ್ಲಿ ಜನಿಸಿದ ಅಂಕುರ್ ಬೆಟಗೇರಿಯವರು ಕ್ಲಿನಿಕಲ್ ಸೈಕಾಲಜಿಯಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದಿದ್ದಾರೆ. ಈಗ ದೆಹಲಿ ವಿಶ್ವವಿದ್ಯಾನಿಲಯದ ಭಾರತೀ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಕವಿ, ಕಥೆಗಾರ ಮತ್ತು ಅನುವಾದಕರಾದ ಇವರು ಕನ್ನಡ ಮತ್ತು ಇಂಗ್ಲಿಶ್ ಭಾಷೆಗಳಲ್ಲಿ ಅನೇಕ ಕೃತಿಗಳನ್ನು ರಚಿಸಿದ್ದಾರೆ.

**ಕನ್ನಡದ ಕೃತಿಗಳು**

೧. ಹಿಡಿದ ಉಸಿರು

೨. ಹಳದಿ ಪುಸ್ತಕ

೩. ಮಾಳವಿಕಾ ಮತ್ತು ಇತರ ಕಥೆಗಳು

೪. **ಇಂಗ್ಲಿಶ್ ಕೃತಿಗಳು**

1. The Bliss and Madness of Being Human (Poetry collection)
2. Bhog and other stories

# ಬರಹಗಾರ

**ಹೆಸರು** : ಸಿ.ಪಿ.ನಾಗರಾಜ ( ೧೯೪೫ )

**ತಾಯಿ** : ಲಕ್ಷ್ಮಿದೇವಮ್ಮ, ಮದ್ದೂರು, ಮಂಡ್ಯ ಜಿಲ್ಲೆ.

**ತಂದೆ** : ಪುಟ್ಟೇಗೌಡ, ಚೆಕ್ಕೆರೆ, ಚೆನ್ನಪಟ್ಟಣ ತಾಲ್ಲೂಕು, ರಾಮನಗರ ಜಿಲ್ಲೆ.

**ಓದು** : ಎಂ.ಎ., ಪಿಎಚ್.ಡಿ.,

**ಕೆಲಸ** : ಕನ್ನಡ ಅಧ್ಯಾಪಕ

೧೯೭೧–೭೨ ಅರ್ಜುನಪುರಿ ಕಾಲೇಜು, ಮದ್ದೂರು, ಮಂಡ್ಯ ಜಿಲ್ಲೆ.

೧೯೭೨–೨೦೦೩ ಭಾರತಿ ಕಾಲೇಜು, ಕಾಳಮುದ್ದನದೊಡ್ಡಿ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ.

೨೦೦೬–೨೦೨೧ ತೇಜಸ್ವಿ ಸ್ನಾತಕೋತ್ತರ ಕೇಂದ್ರ, ಮಹಾರಾಣಿ ಲಕ್ಷ್ಮೀ ಅಮ್ಮಣ್ಣಿ ಮಹಿಳಾ ಕಾಲೇಜು, ಮಲ್ಲೇಶ್ವರಂ, ಬೆಂಗಳೂರು.

## ಬರಹ

### ೧. ಮುದ್ರಿತ ಪುಸ್ತಕಗಳು

**ನಾಟಕ:** ಭಾಗೀರಥಿ, ಅಂಬೆ, ಹಾವು, ಅಂಗಿಬಟ್ಟೆ, ಒಂದು ರೂಪಾಯಿ, ಕಳ್ಳರಿದ್ದಾರೆ ಎಚ್ಚರಿಕೆ, ಹೆಣದ ಹಣ, ಮೂರು ಸಾಮಾಜಿಕ ನಾಟಕಗಳು

**ಗದ್ಯ:** ಕರಿಯನ ಪುರಾಣ, ಕನಕನ ಅವ್ವ, ಹಳ್ಳಿಗಾಡಿನ ರೂವಾರಿ, ಡಾ.ಬಂದೀಗೌಡ, ಆಣೆ ಪ್ರಮಾಣಗಳು, ಬಯ್ಗುಳ, ಸರ್ವಜ್ಞವಚನಗಳ ಓದು, ಅಲ್ಲಮ ವಚನಗಳ ಓದು, ಶಿವಶರಣೆಯರ ವಚನಗಳ ಓದು, ಶಿವಶರಣರ ವಚನಗಳ ಓದು, ಬಸವಣ್ಣ ವಚನಗಳ ಓದು, ಮುದ್ದೆಗಂಟು, ಶಿವಶರಣಶರಣೆಯರ ವಚನಗಳ ಓದು

ಪಂಪ ಭಾರತ ಓದು ಸರ್ವಜ್ಞ ಮತ್ತು ಅಲ್ಲಮ ವಚನಗಳ ಓದು
ವಚನದಿಂದ ಆಯ್ದ ಸಾಲುಗಳ ಓದು
ಕುವೆಂಪು ಕವನಗಳ ಓದು ಕನ್ನಡ ಬಯ್ಗುಳ ಓದು
ಬಸವಯುಗದ ವಚನಕಾರರು
ಕನಕದಾಸರ ರಾಮಧಾನ್ಯ ಪ್ರಸಂಗ ಓದು
ಬ್ರೆಕ್ಟ್ ಕವನಗಳ ಓದು
ರವೀಂದ್ರನಾಥ ಠಾಕೂರ್ ಕವನಗಳ ಓದು
ಸೀತಾ ಪರಿತ್ಯಾಗ ಪ್ರಸಂಗ

## ೨. ಡಿಜಿಟಲ್ ಪುಸ್ತಕಗಳು

೧. ಕನ್ನಡ ಸಾಹಿತ್ಯ ಸಂಚಯ :
https://cpnagaraj.sanchaya.net
೨. ಮೈಲಾಂಗ್–ಕನ್ನಡ ಇ ಬುಕ್ಸ್ – ಆಡಿಯೋ ಬುಕ್ಸ್
https://mylang.in
೩. ಋತುಮಾನ
https://ruthumana.com

## 3. C P Nagaraj-You Tube

Play lists
ಸರ್ವಜ್ಞನ ವಚನಗಳ ಓದು–೧೩ ಎಪಿಸೋಡ್
ಅಲ್ಲಮನ ವಚನಗಳ ಓದು– ೩೬ ಎಪಿಸೋಡ್
ಬಸವಣ್ಣನ ವಚನಗಳ ಓದು–೨೬ ಎಪಿಸೋಡ್
ಶಿವಶರಣಶರಣೆಯರ ವಚನಗಳ ಓದು–೫೨ ಎಪಿಸೋಡ್
ವಚನದಿಂದ ಆಯ್ದ ಸಾಲುಗಳ ಓದು–೧೬೨ ಎಪಿಸೋಡ್
ಮುದ್ದೆಗಂಟು–೬೦ ಎಪಿಸೋಡ್
ಹಳ್ಳಿಗಾಡಿನ ರೂವಾರಿ ಜಿ.ಮಾದೇಗೌಡ–೧೫ ಎಪಿಸೋಡ್
ಜನಪರ ಚೇತನ ಡಾ.ಬಂದೀಗೌಡ–೧೫ ಎಪಿಸೋಡ್
ಕುವೆಂಪು ಕವನಗಳ ಓದು–೧೩ ಎಪಿಸೋಡ್
ಪಂಪ ಭಾರತ ಪ್ರಸಂಗಗಳು – ೯ ಎಪಿಸೋಡ್
ಆಣೆ ಪ್ರಮಾಣಗಳ ಓದು–೧೦
ಕನಕದಾಸರ ರಾಮಧಾನ್ಯ ಪ್ರಸಂಗ–೧

ಲಕ್ಷ್ಮೀಶ ಕವಿಯ ಜೈಮಿನಿ ಭಾರತದ ಸೀತಾ ಪರಿತ್ಯಾಗ ಪ್ರಸಂಗ–೬
ಡಿ.ಎನ್. ಶಂಕರ ಭಟ್ – ಭಾಷೆಯ ಬಗೆಗೆ ನೀವೇನು ಬಲ್ಲಿರಿ–೪೧
ಸಿ.ಎಚ್. ರಾಜಶೇಖರ್– ಸಮಗ್ರ ಬುದ್ಧ ಸಾಹಿತ್ಯ ಮಾಲೆ–೩೦
ಕೆ.ವಿ. ನಾರಾಯಣ– ನುಡಿಯರಿಮೆ ಬರಹಗಳು–೨೬
ಕೆ.ವಿ. ನಾರಾಯಣ– ಕನ್ನಡ ಜಗತ್ತು : ಅರ್ಧ ಶತಮಾನ – ೯೧
ದೇವನೂರು ಮಹಾದೇವ – ಎದೆಗೆ ಬಿದ್ದ ಅಕ್ಷರ–೨೯
ಬಿ.ವಿ. ವೀರಭದ್ರಪ್ಪ – ವೇದಗಳಲ್ಲಿ ಜನಸಾಮಾನ್ಯರು–೪೦

ಗೂಗಿ ವಾ ಥಿಯಾಂಗೊ ವೈಚಾರಿಕ ಬರಹಗಳು–೧೩
(ಅನುವಾದ : ಎಚ್.ಎಸ್. ನಾಗಭೂಷಣ)

ಮುರಳಿಧರ ಜಗತಾಪ – ಸಮಾಜ ಸುಧಾರಕ ಮಹಾತ್ಮ ಫುಲೆ – ೨೭
(ಅನುವಾದ : ಅಕಿಂಚನ)

ಬರ್ಟ್ರೆಂಡ್ ರಸೆಲ್ – ಸುಖ ಸಾಧನೆ – ೬೪
(ಅನು : ಯೋಗನರಸಿಂಹಮ್)

ರೈನರ್ ಮಾರಿಯಾ ರಿಲ್ಕ್ – ಯುವಕವಿಗೆ ಬರೆದ ಪತ್ರಗಳು – ೧೦
(ಅನು : ಓ.ಎಲ್. ನಾಗಭೂಷಣ ಸ್ವಾಮಿ)

**ವಿಳಾಸ :** ಸಿ.ಪಿ.ನಾಗರಾಜ, 75, 5ನೇ ಕ್ರಾಸ್, 'ಎ' ಬ್ಲಾಕ್, ಕ್ರಿಷ್ಣ ಗಾರ್ಡನ್, ಆರ್.ವಿ. ಕಾಲೇಜು ಅಂಚೆ, ಬೆಂಗಳೂರು–560 059. ಮೊ : 9986347521

e-mail : ngy7777@gmail.com

ಪ್ರತಿ ಕವಿತೆಯ ಉದ್ದೇಶ, ಧೋರಣೆ ಏನಾಗಿರಬಹುದು ಎಂಬ ಸಾಮಾನ್ಯ ಅಂಶವನ್ನು ಇಟ್ಟುಕೊಂಡು ಇಲ್ಲಿನ ಕವಿತೆಗಳನ್ನು ನಾಗರಾಜ್ ಅವರು ವಿವರಿಸಲು, ವಿಶ್ಲೇಷಣೆಗೆ ಒಳಪಡಿಸಲು ಯತ್ನಿಸಿದ್ದಾರೆ. ಆಯಾ ಕವಿತೆಯಲ್ಲಿ ಮುಖ್ಯವೆನ್ನಿಸುವ ಸಾಲುಗಳ ಸ್ವಾರಸ್ಯವನ್ನು ವಿವರಿಸಲು ಯತ್ನಿಸಿದ್ದಾರೆ. ಹೀಗೆ ಮಾಡುವಾಗ ಓದುಗರಿಗೆ ಈವರೆಗೂ ತಿಳಿದಿರದ ಸಂಗತಿಗಳು ಅರಿವಿಗೆ ಬರಬಹುದು. ಉದಾಹರಣೆಗೆ, 'ರೈತನಿಗೆ ತನ್ನ ಹೊಲದ್ದೇ ಚಿಂತೆ' ಎನ್ನುವ ಕವಿತೆಯಲ್ಲಿ ಕವಿತೆಯ ದೀರ್ಘ ವಿವರಣೆಯ ಜತೆಗೆ, ಎಂ.ಎಸ್. ಸ್ವಾಮಿನಾಥನ್ ಅವರ ವಿಚಾರಗಳ ಪ್ರಸ್ತಾಪವೂ ಇದೆ. ಇದರಿಂದಾಗಿ ಕವಿತೆಯ ವಿಶ್ಲೇಷಣೆಗೆ ಒಂದು ಭಾರತೀಯ ಸಂದರ್ಭ ಪ್ರಾಪ್ತವಾಗಿದೆ. ಅದೇ ರೀತಿ 'ಬೇಬಿಲಾನ್ ನಗರ', 'ಲೀಮಾ ನಗರ', 'ಚೀನಾದ ದೊಡ್ಡಗೋಡೆ', 'ಬೈಜ್ಞಾಂಟಿಯಮ್ ಸಾಮ್ರಾಜ್ಯ' ವಿವರಣೆ; 'ಪುಸ್ತಕ ದಹನ' ಕವಿತೆಗೆ ನೀಡಿರುವ ಟಿಪ್ಪಣಿಗಳೂ. ಇಂತಹ ಅನೇಕ ಸಂಗತಿಗಳು ಕವಿತೆಗಳ ವಿಶ್ಲೇಷಣೆಯಲ್ಲಿ ದೊರಕುತ್ತವೆ. ಅದು ಹೊಸ ಓದುಗನಿಗೆ ಪ್ರಯೋಜನಕಾರಿಯೇ.

'ಫಿನ್ಲ್ಯಾಂಡ್–1940' , 'ಕ್ರಿಟಿಕಲ್ ಧೋರಣೆಯ ಬಗ್ಗೆ', ' ಊರುಸೋಲುಗಳು'– ಕವಿತೆಗಳನ್ನು ಕುರಿತು ನೀಡಿರುವ ಟಿಪ್ಪಣಿಗಳು ಆಸಕ್ತಿದಾಯಕವಾಗಿವೆ. ಪ್ರತಿಪದಾರ್ಥ, ಸಾರಾಂಶ, ವ್ಯಾಖ್ಯಾನ, ವಿಶ್ಲೇಷಣೆಗಳ ಮೂಲಕ ಕಾವ್ಯವನ್ನು ಅರ್ಥ ಮಾಡಿಕೊಳ್ಳುವುದು ಕನ್ನಡಕ್ಕೆ ಹೊಸ ವಿಧಾನವೇನಲ್ಲ. ಹಳಗನ್ನಡದಲ್ಲಿ ಪರಿಣತಿ ಹೊಂದಿಲ್ಲದ, ಶ್ಲೇಷೆ, ಅಂತರ್ಗತ ಅರ್ಥ, ಛಂದಸ್ಸು, ಸಮಾಸ ಇತ್ಯಾದಿಗಳ ಕುರಿತು ಕ್ರಮಶಿಕ್ಷಣ ಪಡೆದಿರದ ಓದುಗ ವರ್ಗ ಇಂದಿಗೂ ಮೇಲೆ ಸೂಚಿಸಿದ ವಿಧಾನದಲ್ಲಿಯೇ ಕಾವ್ಯವನ್ನು ಅರಿತುಕೊಳ್ಳಲು ಯತ್ನಿಸುತ್ತಿದೆ.

ಸಿ.ಪಿ.ನಾಗರಾಜ್ ಅವರ ಈ ಪುಸ್ತಕದ ವಿಶೇಷತೆಯೆಂದರೆ ಬ್ರೆಕ್ಟ್ ರಂತಹ ಆಧುನಿಕ ಕವಿಯ ಅನುವಾದಿತ ಕವಿತೆಗಳನ್ನು ಆ ವಿಧಾನದಲ್ಲಿ ಹೊಸ ಓದುಗರಿಗೆ ಪರಿಚಯಿಸಲು ಪ್ರಯತ್ನಿಸಿರುವುದು. ಆ ಮೂಲಕ ಬ್ರೆಕ್ಟ್ ರ ಕಾವ್ಯಮನೋಧರ್ಮವನ್ನು ಅರಿಯಲು ಪ್ರಯತ್ನಿಸಿರುವುದು ಮತ್ತು ಅದರಲ್ಲಿ ಯಶಸ್ವಿಯಾಗಿರುವುದು.

ಕೇಶವ ಮಳಗಿ

ನಾಸು ಸ್ಮಾರಕ ಪ್ರಕಾಶನ, ಬೆಂಗಳೂರು.

ರೂ. 150/–